ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಫಿಕ್ಹುಸ್ಸುನ್ನಃ ಭಾಗ-II ಮರ್ಹೂಮ್ ಇಬ್ರಾಹೀಮ್ ಸಈದ್‌ರವರು, ಮಯ್ಯಿತ್ ಸಂಸ್ಕಾರಕ್ಕೆ ಸಂಬಂಧಿಸಿ ರಚಿಸಿದ ಸಮಗ್ರ ವಿಷಯಗಳನ್ನೊಳಗೊಂಡ ಕೃತಿಯಾಗಿದ್ದು, ಇದು ಅದರ ನಾಲ್ಕನೇ ಆವೃತ್ತಿಯಾಗಿದೆ. ಸುಪ್ರಸಿದ್ಧ ಅಹ್ಲೆಹದೀಸ್ ವಿದ್ವಾಂಸರಾಗಿದ್ದ ಈಜಿಪ್ಟ್‌ನ ಮರ್ಹೂಮ್ ಸಯ್ಯದ್ ಸಾಬಿಕ್‌ರವರ ಫಿಕ್ಹುಸ್ಸುನ್ನಃ ಎಂಬ ಅರಬಿ ಗ್ರಂಥ ಹಾಗೂ ಉಪಭೂಖಂಡದ ಇಸ್ಲಾಮಿ ಗ್ರಂಥಕಾರ ಹಾಗೂ ವಿದ್ವಾಂಸ ಮುಹಮ್ಮದ್ ಆಸಿಮ್ ಹದ್ದಾದ್‌ರ ಫಿಕ್ಹುಸ್ಸುನ್ನಃ ಎಂಬ ಉರ್ದು ಗ್ರಂಥದ ಆಧಾರದಲ್ಲಿ ಇದನ್ನು ರಚಿಸಲಾಗಿದೆ.

ವಿಷಯ ವಿವರಗಳಿಗೆ ಕುರ್‌ಆನ್ ಮತ್ತು ಹದೀಸ್‌ಗಳನ್ನು ಅವಲಂಬಿಸಲಾಗಿದೆ. ಅದಲ್ಲದೆ ಮೂಲಗ್ರಂಥಗಳು ನಾಲ್ಕು ಮದ್‌ಹಬ್‌ಗಳ ಅಭಿಪ್ರಾಯಗಳನ್ನು ಒಳಗೊಂಡಿವೆ ಯಾದರೂ ಕರ್ನಾಟಕದ ಮುಸ್ಲಿಮರ ಮಧ್ಯೆ ಶಾಫಿಈ ಮತ್ತು ಹನಫೀ ಎಂಬ ಎರಡು ವಿಧಾನಗಳು ಮಾತ್ರ ಪ್ರಚಲಿತವಿದೆ. ಆದ್ದರಿಂದ ಕನ್ನಡದಲ್ಲಿ ರಚಿಸುವಾಗ ಕೇವಲ ಈ ಎರಡು ಕರ್ಮಶಾಸ್ತ್ರಗಳಿಗೆ ಸಂಬಂಧಿಸಿದ ವಿಷಯಗಳನ್ನು ಇದರಲ್ಲಿ ಉಲ್ಲೇಖಿಸಲಾಗಿದೆ. ಇದರಿಂದ ಮೂರೂ ದೃಷ್ಟಿಕೋನದವರಿಗೆ ಪ್ರಯೋಜನವಾದೀತೆಂಬುದರಲ್ಲಿ ಸಂದೇಹವಿಲ್ಲ. ಫಿಕ್ಹುಸ್ಸುನ್ನಃ I ಮತ್ತು II ಭಾಗದಲ್ಲಿ ನಮಾಝ್ ಮತ್ತು ಮಯ್ಯಿತ್ ಸಂಸ್ಕಾರಕ್ಕೆ ಸಂಬಂಧಿಸಿದ ವಿಷಯಗಳಿದ್ದು ಉಪವಾಸ ವ್ರತ, ಝಕಾತ್ ಮತ್ತು ಹಜ್ಜ್‌ಗಳ ವಿಧಿವಿಧಾನಗಳನ್ನು III, IV ಮತ್ತು V ಭಾಗಗಳಲ್ಲಿ ಪ್ರಕಟಿಸಲಾಗಿದೆ.

'ಮಯ್ಯಿತ್ ಸಂಸ್ಕಾರ' ಎಂಬ ಫಿಕ್ಹುಸ್ಸುನ್ನಃದ ಈ ಭಾಗದಲ್ಲಿ ರೋಗ ಶಯ್ಯೆಯಿಂದ ಹಿಡಿದು ವ್ಯಕ್ತಿ ಮರಣ ಹೊಂದುವ ಮತ್ತು ಮೃತ ಶರೀರದ ಅಂತ್ಯ ಸಂಸ್ಕಾರದ ವರೆಗಿನ ವಿಧಿ ವಿಧಾನಗಳನ್ನು ಹಾಗೂ ಶಿಷ್ಟಾಚಾರಗಳನ್ನು ಸವಿಸ್ತಾರ ವಿವರಿಸಲಾಗಿದೆ. ಅಷ್ಟೇ ಅಲ್ಲ, ಅಂತ್ಯ ಸಂಸ್ಕಾರದ ಬಳಿಕವೂ ಅನುಸರಿಸಬೇಕಾದ ಶಿಷ್ಟಾಚಾರಗಳನ್ನು ತಿಳಿಯ ಪಡಿಸಲಾಗಿದೆ. ಜೊತೆಗೆ ಮಯ್ಯಿತ್ ನಮಾಝ್‌ನ ಕ್ರಮ, ಅದರಲ್ಲಿ ಪಠಿಸುವ ದಿಕ್ರ್ ದುಆಗಳು ಮತ್ತು ತಸ್ಬೀತ್, ಗೋರಿ ಸಂದರ್ಶನದ ದುಆ ಇತ್ಯಾದಿಗಳನ್ನು ಮೂಲ ಅರಬಿಯಲ್ಲಿ ಹಾಗೂ ಅದರ ಕನ್ನಡ ಲಿಪ್ಯಂತರ ಮತ್ತು ಕನ್ನಡ ಅನುವಾದವನ್ನು ಓದುಗರಿಗೆ ಕಂಠಪಾಠ ಮಾಡಲು ಸುಲಭವಾಗುವಂತೆ ಸೇರಿಸಲಾಗಿದೆ. ಈ ಗ್ರಂಥವು ಕನ್ನಡಿಗ ಮುಸ್ಲಿಮರ ಪಾಲಿಗೆ ಮಾರ್ಗದರ್ಶಕ ಸಂಗ್ರಹ ಯೋಗ್ಯ ಕೃತಿಯಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

ಮರಣದ ಹಂತವು ಅತ್ಯಂತ ಖಚಿತವಾದ ಹಂತವಾಗಿದೆ. ಮನುಷ್ಯ ಆ ಹಂತವನ್ನು ದಾಟಲೇಬೇಕು. ಜೀವನ ಸಿಕ್ಕಿದವನಿಗೆ ಮರಣ ಬರುವುದು ಅನಿವಾರ್ಯ. ಇಂದು ಜೀವಿಸಿರುವವನು ನಾಳೆ ಸಾಯಲೇಬೇಕು. ಇಂದು ಮಾತಾಡುವವನು ನಾಳೆ ಮೌನವಾಗುವನು. ಇಂದು ನೋಡುತ್ತಿರುವವನ ಕಣ್ಣು ಒಂದು ದಿನ ತನ್ನ ಜ್ಯೋತಿಯನ್ನು ಕಳಕೊಳ್ಳುವುದು. ಪ್ರತಿಯೊಬ್ಬನೂ ಒಂದು ದಿನ ಮರಣದ ಬಾಗಿಲಲ್ಲಿ ನಿಲ್ಲುವನು. ಅವನ ಹಿಂದೆ ಇಹಲೋಕ ಮತ್ತು ಮುಂದೆ ಪರಲೋಕವಿರುವುದು. ಮರಣದ ಬಾಗಿಲನ್ನು ಹೊಕ್ಕ ಮನುಷ್ಯನು ಇನ್ನೆಂದೂ ಮರಳಿ ಬಾರದ ಜಗತ್ತಿಗೆ ಕಾಲಿಡುತ್ತಾನೆ. ಅವನು ತನ್ನ ಕರ್ಮರಂಗದಿಂದ ಹೊರಟು ಕರ್ಮಗಳ ಶಾಶ್ವತ ಪರಿಣಾಮಗಳನ್ನು ಅನುಭವಿಸುವ ಲೋಕಕ್ಕೆ ಹೋಗುತ್ತಾನೆ.

ಜೀವನವು ಒಂದು ಅನಿಶ್ಚಿತ ವಸ್ತು. ಮರಣವು ಒಂದು ನಿಶ್ಚಿತ ವಾಸ್ತವಿಕತೆ. ನಮಗೆ ಮರಣ ಬಾರದ ಕಾರಣ ನಾವು ಜೀವಂತವಾಗಿದ್ದೇವೆ. ಮರಣದ ಸಮಯ ಯಾರಿಗೂ ತಿಳಿದಿಲ್ಲ. ನಾವು ಪ್ರತಿಕ್ಷಣವೂ ಮರಣದ ಕಡೆಗೆ ಧಾವಿಸುತ್ತಿದ್ದೇವೆ. ನಾವು ಜೀವನಕ್ಕಿಂತಲೂ ಮರಣಕ್ಕೆ ಹೆಚ್ಚು ನಿಕಟವಾಗುತ್ತಿದ್ದೇವೆ. ಮರಣವು ಮುಂದಿನ ಘಳಿಗೆಯೂ ಬರಬಹುದು. ಮರಣವು ಬರಲಿದೆ ಎನ್ನುವುದಕ್ಕಿಂತ ಅದು ಬಂದಿದೆ ಎನ್ನುವುದೇ ಹೆಚ್ಚು ಸೂಕ್ತ. ''ಉದ್ದ ನಫ್ಸಕ ಮಿನ್ ಅಸ್‌ಹಾಬಿಲ್ ಖುಬೂರ್'' ಅರ್ಥಾತ್- ನಿಮ್ಮನ್ನು ನೀವು ಗೋರಿಯವರೆಂದು ಪರಿಗಣಿಸಿ ಎಂಬ ಪ್ರವಾದಿ ವಚನವು ಅದನ್ನೇ ಸೂಚಿಸುತ್ತದೆ.

ಡಾ. ಮರ್ಹೂಮ್ ಇಬ್ರಾಹೀಮ್ ಸಈದ್
('ನೂರೆಂಟು ಚಿಂತನೆ' ಎಂಬ ಕೃತಿಯಲ್ಲಿ)

# ಅನುಕ್ರಮಣಿಕೆ

# ರೋಗ ಮತ್ತು ಶುಶ್ರೂಷೆ

## 1. ರೋಗವು ಮುಸ್ಲಿಮನ ಪಾಲಿಗೆ ಪಾಪಗಳ ಪ್ರಾಯಶ್ಚಿತ್ತ

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಅಲ್ಲಾಹನು ಯಾವ ದಾಸನ ಜತೆ ಒಳಿತು ಮಾಡ ಬಯಸುತ್ತಾನೋ ಅವನನ್ನು ತನ್ನ ಕಡೆಯಿಂದ ರೋಗದಲ್ಲಿ ಸಿಲುಕಿಸುತ್ತಾನೆ."

(ವರದಿ: ಹ. ಅಬೂಹುರ್ೈರಾ(ರ) - ಬುಖಾರಿ, ಮುಸ್ಲಿಮ್)

"ಒಬ್ಬ ಮುಸ್ಲಿಮನಿಗೆ ಏನಾದರೂ ಕಷ್ಟ, ಕಾಯಿಲೆ, ಚಿಂತೆ, ದುಃಖ, ದುಮ್ಮಾನ ತಲುಪಿದರೆ ಎಲ್ಲಿಯವರೆಗೆಂದರೆ ಅವನಿಗೆ ಒಂದು ಮುಳ್ಳು ತಾಗಿದರೂ ಅಲ್ಲಾಹನು ಅದರ ಮೂಲಕ ಅವನ ಪಾಪಗಳನ್ನು ಕಡಿಮೆ ಮಾಡುತ್ತಾನೆ."

(ವರದಿ: ಹ. ಅಬೂಹುರ್ೈರಾ(ರ) - ಬುಖಾರಿ, ಮುಸ್ಲಿಮ್)

"ಒಬ್ಬ ದಾಸನು ಕಾಯಿಲೆ ಬಿದ್ದಾಗ ಅಥವಾ ಅವನು ಪ್ರಯಾಣದಲ್ಲಿದ್ದಾಗ ಅಲ್ಲಾಹನು ಅವನ ಪಾಲಿಗೆ ಅವನು ಆರೋಗ್ಯವಂತನಾಗಿ ಮತ್ತು ಊರಿನಲ್ಲಿರುವ ಸ್ಥಿತಿಯಲ್ಲಿ ಮಾಡುತ್ತಿದ್ದ ಪುಣ್ಯಕಾರ್ಯಗಳನ್ನೇ ಲಿಖಿತಗೊಳಿಸುತ್ತಾನೆ."

(ವರದಿ: ಹ. ಅಬೂಮೂಸಾ ಅಶ್‌ಅರೀ(ರ) - ಬುಖಾರಿ)

## 2. ಕಾಯಿಲೆ ಬಿದ್ದಾಗ ತಾಳ್ಮೆ ವಹಿಸುವುದರ ಪುಣ್ಯ

ತಾಳ್ಮೆಯು ಅಲ್ಲಾಹನ ಕಡೆಯಿಂದ ಮುಸ್ಲಿಮನಿಗೆ ನೀಡಲ್ಪಟ್ಟ ಅತ್ಯುತ್ತಮ ಕೊಡುಗೆಯಾಗಿದೆ. ಆದ್ದರಿಂದ ಯಾವುದೇ ಕಾಯಿಲೆ, ದುಃಖ ಅಥವಾ ನಷ್ಟ ಉಂಟಾದರೆ ಅವನು ತಾಳ್ಮೆ ವಹಿಸಬೇಕು.

ಪ್ರವಾದಿ(ಸ) ಹೀಗೆ ಹೇಳಿರುವರು:

"ಸತ್ಯವಿಶ್ವಾಸಿಯ ಸ್ಥಿತಿಯು ವಿಚಿತ್ರವಾಗಿದೆ. ಅವನ ಪಾಲಿಗೆ ಎಲ್ಲ ಸ್ಥಿತಿಯಲ್ಲೂ ಒಳಿತೇ ಇದೆ. ಈ ಸ್ಥಿತಿಯು ಸತ್ಯವಿಶ್ವಾಸಿಯ ಮಟ್ಟಿಗೆ ಮಾತ್ರ ಇರುತ್ತದೆ. ಅವನಿಗೆ ಏನಾದರೂ ಸುಸ್ಥಿತಿ ಒದಗಿದರೆ ಅವನು ಕೃತಜ್ಞತೆ ಸಲ್ಲಿಸುತ್ತಾನೆ. ಇದು ಅವನ ಪಾಲಿಗೆ ಒಳಿತಾಗಿರುತ್ತದೆ. ಅವನಿಗೆ ಏನಾದರೂ ಕಷ್ಟ ಒದಗಿದರೆ ಅವನು ತಾಳ್ಮೆ ವಹಿಸುತ್ತಾನೆ. ಅದೂ ಅವನ ಪಾಲಿಗೆ ಒಳಿತಾಗಿರುತ್ತದೆ." (ವರದಿ: ಹ. ಸುಹೈಬ್ ಬಿನ್ ಸಿನಾನ್(ರ) - ಮುಸ್ಲಿಮ್)

### 3. ರೋಗಿಯ ಪ್ರಾರ್ಥನೆ ಸ್ವೀಕರಿಸಲ್ಪಡುತ್ತದೆ

ಪ್ರವಾದಿ(ಸ) ಹೀಗೆ ಹೇಳಿರುವರು:

"ನೀವು ಯಾರಾದರೂ ರೋಗಿಯ ಸಂದರ್ಶನಕ್ಕೆ ಹೋದರೆ ಅವನಲ್ಲಿ ನಿಮಗಾಗಿ ಪ್ರಾರ್ಥಿಸುವಂತೆ ಕೇಳಿಕೊಳ್ಳಿರಿ. ಏಕೆಂದರೆ (ಸ್ವೀಕಾರಾರ್ಹತೆಯ ದೃಷ್ಟಿಯಿಂದ) ಅವನ ಪ್ರಾರ್ಥನೆಯು ಮಲಕ್‌ಗಳ ಪ್ರಾರ್ಥನೆಯಂತಿರುತ್ತದೆ."

(ವರದಿ: ಹ. ಉಮರ್(ರ) - ಅಹ್ಮದ್, ಇಬ್ನುಮಾಜಃ)

### 4. ರೋಗಿಯು ತನ್ನ ಕಷ್ಟವನ್ನು ಹೇಳುವುದು ಧರ್ಮಸಮ್ಮತ

ರೋಗಿಯು ತನ್ನ ಕಾಯಿಲೆ ಮತ್ತು ಕಷ್ಟವನ್ನು ಜನರಿಗೆ ತಿಳಿಸುವುದು ಧರ್ಮ ಸಮ್ಮತವಾಗಿದೆ. ಆದರೆ ಅದರಲ್ಲಿ ಅಸಹನೆ ಮತ್ತು ಅಲ್ಲಾಹನ ಬಗ್ಗೆ ಕೋಪ ಪ್ರಕಟನೆ ಇರಬಾರದು.

"ನಾನು ಪ್ರವಾದಿ(ಸ) ಅವರ ಸನ್ನಿಧಿಯಲ್ಲಿ ಹಾಜರಾದೆ. ಅವರು ಆಗ ತೀವ್ರ ಜ್ವರ ದಿಂದ ನರಳುತ್ತಿದ್ದರು. ನಾನು ಅವರ ಶರೀರದ ಮೇಲೆ ಕೈಯಿಟ್ಟು ಹೇಳಿದೆ: "ತಮಗೆ ತೀವ್ರ ಜ್ವರವಿದೆ." ಆಗ ಪ್ರವಾದಿ(ಸ) ಹೇಳಿದರು: "ಹೌದು, ನನಗೆ ನಿಮ್ಮ ಪೈಕಿ ಇಬ್ಬರಿಗೆ ಬರುವಷ್ಟು ಜ್ವರ ಬರುತ್ತಿದೆ."

(ವರದಿ: ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) - ಬುಖಾರಿ, ಮುಸ್ಲಿಮ್)

### 5. ರೋಗಿಯ ಸಂದರ್ಶನದ ಮಹತ್ವ

ಪ್ರವಾದಿ(ಸ) ಹೀಗೆ ಹೇಳಿರುವರು:

"ಒಬ್ಬ ಮುಸ್ಲಿಮನ ಮೇಲೆ ಇನ್ನೊಬ್ಬ ಮುಸ್ಲಿಮನ ಐದು ಹಕ್ಕುಗಳಿವೆ.

1) ಸಲಾಮ್‌ಗೆ ಉತ್ತರಿಸುವುದು 2) ರೋಗಿಯ ಸಂದರ್ಶನ ಮಾಡುವುದು 3) ಅಂತಿಮ ಯಾತ್ರೆಯ ಜತೆ ಹೋಗುವುದು 4) ಆಮಂತ್ರಣವನ್ನು ಸ್ವೀಕರಿಸುವುದು 5) ಅವನಿಗೆ ಸೀನು ಬಂದಾಗ 'ಯರ್ಹಮಕಲ್ಲಾಹ್' (ಅಲ್ಲಾಹನು ನಿನ್ನ ಮೇಲೆ ದಯೆ ತೋರಲಿ) ಎನ್ನುವುದು." (ವರದಿ: ಹ. ಅಬೂಹುರೈರಾ(ರ) - ಬುಖಾರಿ, ಮುಸ್ಲಿಮ್)

"ಹಸಿದವನಿಗೆ ಉಣ ಬಡಿಸಿರಿ, ರೋಗಿಯನ್ನು ಸಂದರ್ಶಿಸಿರಿ ಮತ್ತು ಸೆರೆವಾಸಿಯನ್ನು ಬಿಡುಗಡೆಗೊಳಿಸಿರಿ." (ವರದಿ: ಹ. ಅಬೂಮೂಸಾ(ರ) - ಬುಖಾರಿ)

### 6. ರೋಗಿಯ ಸಂದರ್ಶನದ ಪುಣ್ಯ

ಪ್ರವಾದಿ(ಸ) ಹೀಗೆ ಹೇಳಿರುವರು:

"ಒಬ್ಬ ಮುಸ್ಲಿಮನು ರೋಗಿಯಾದ ಇನ್ನೊಬ್ಬ ಮುಸ್ಲಿಮ್ ಸೋದರನ ಸಂದರ್ಶನಕ್ಕೆ ಹೋದಾಗ ಅವನು ಮರಳುವ ತನಕ ಸ್ವರ್ಗದ ಸಸ್ಯದಲ್ಲಿರುತ್ತಾನೆ."

(ವರದಿ: ಹ. ಸೌಬಾನ್(ರ) - ಅಹ್ಮದ್, ಮುಸ್ಲಿಮ್, ತಿರ್ಮಿದಿ)

ಮುಸ್ಲಿಮ್‌ನ ವರದಿಯಲ್ಲಿ ಈ ಕೆಳಗಿನ ಪದಗಳು ಹೆಚ್ಚಿವೆ: ಸಹಾಬಿಗಳು ಪ್ರವಾದಿ ವರ್ಯರಲ್ಲಿ(ಸ) ವಿಚಾರಿಸಿದರು. 'ಸ್ವರ್ಗದ ಸಸ್ಯ' ಎಂದರೇನು? ಪ್ರವಾದಿ(ಸ) ಹೇಳಿದರು: 'ಅದರ ಫಲ'

**7. ಸಂದರ್ಶನದ ಶಿಷ್ಟಾಚಾರಗಳು**

ರೋಗಿಯ ಸಂದರ್ಶನಕ್ಕೆ ಹೋದಾಗ ಅವನ ಕ್ಷೇಮಕ್ಕಾಗಿ ಪ್ರಾರ್ಥಿಸಬೇಕು. ಅವನಿಗೆ ಸಹನೆ ವಹಿಸಲು ಉಪದೇಶಿಸಬೇಕು. ಅವನಲ್ಲಿ ಸಂತೋಷ ಉಂಟು ಮಾಡುವಂತಹ ಮಾತುಕತೆ ನಡೆಸಬೇಕು. ನಿಮ್ಮ ಸಂದರ್ಶನದಿಂದ ಅವನಿಗೆ ತನ್ನ ಕಷ್ಟ ಕಡಿಮೆಯಾಗಿದೆ ಯೆಂದು ಭಾಸವಾಗಬೇಕು.

**8. ಮುಸ್ಲಿಮೇತರ ರೋಗಿಗಳನ್ನು ಸಂದರ್ಶಿಸುವುದು**

ಮುಸ್ಲಿಮೇತರ ರೋಗಿಗಳನ್ನು ಸಂದರ್ಶಿಸುವುದು ಕೂಡಾ ಧರ್ಮಸಮ್ಮತವಾಗಿದೆ. ಪ್ರವಾದಿ(ಸ) ಯಹೂದಿ ಮತ್ತು ಬಹುದೇವಾರಾಧಕರನ್ನು ಕೂಡಾ ಅವರು ಕಾಯಿಲೆ ಬಿದ್ದಾಗ ಸಂದರ್ಶಿಸಿದ ಬಗ್ಗೆ ಹದೀಸ್ ವರದಿಗಳಿವೆ.

♦♦♦

# ಮರಣದ ಸಾಮಾನ್ಯ ವಿಧಿಗಳು

**1. ಮರಣದ ಸ್ಮರಣೆ**

ಪ್ರವಾದಿ(ಸ) ಹೀಗೆ ಹೇಳಿರುವರು:

ಸುಖ ಭೋಗಗಳ ರುಚಿ ಕೆಡಿಸಿ ಬಿಡುವ ವಸ್ತು(ಮರಣ)ವನ್ನು ಅತ್ಯಧಿಕ ಸ್ಮರಿಸಿರಿ.

**(ವರದಿ: ಹ. ಅಬೂಹುರೈರಾ(ರ) - ಅಹ್ಮದ್, ನಸಾಈ, ತಿರ್ಮಿದಿ, ಇಬ್ನುಮಾಜಃ)**

ಪ್ರವಾದಿ(ಸ) ಈ ರೀತಿ ಹೇಳಿರುವುದಾಗಿ ಹ. ಅಬೂಹುರೈರಾ(ರ) ವರದಿ ಮಾಡಿರುವರು:

"ಅಲ್ಲಾಹನು ಹೇಳುತ್ತಾನೆ, ದಾಸನು ನನ್ನ ಭೇಟಿಯನ್ನು ಇಷ್ಟಪಡುವಾಗ ನಾನೂ ಅವನ ಭೇಟಿಯನ್ನು ಇಷ್ಟಪಡುತ್ತೇನೆ. ದಾಸನು ನನ್ನ ಭೇಟಿಯನ್ನು ಅಪ್ರಿಯವೆಂದು ಬಗೆದಾಗ ನನಗೂ ಅವನ ಭೇಟಿಯು ಅಪ್ರಿಯವಾಗುತ್ತದೆ."

ಇದನ್ನು ಕೇಳಿ ಜನರು ಹ. ಅಬೂಹುರೈರಾ(ರ) ಅವರಲ್ಲಿ ಈ ರೀತಿ ಪ್ರಶ್ನಿಸಿದರು: "ನಮ್ಮಲ್ಲಿ ಪ್ರತಿಯೊಬ್ಬನಿಗೂ ಮರಣವು ಅಪ್ರಿಯವಾಗಿದೆ ಮತ್ತು ಅದರಿಂದ ಅವನು ಹೆದರುತ್ತಾನೆ."

ಆಗ ಹ. ಅಬೂಹುರೈರಾ(ರ) ಹೇಳಿದರು:

"ಅವನ ಸಮಯ ಬಂದಾಗ ಅವನಿಗದು ಗೊತ್ತಾಗುತ್ತದೆ. ಅರ್ಥಾತ್: ಮನುಷ್ಯನ ಅಂತಿಮ ಸಮಯ ಬಂದಾಗ ಅವನ ಪರಿಣಾಮ ಏನಾಗಲಿದೆಯೆಂದು ಅವನಿಗೆ ತಿಳಿದು ಬಿಡುತ್ತದೆ. ಅವನು ಒಳ್ಳೆಯವನಾಗಿದ್ದರೆ ಮರಣವನ್ನು ಭಯಪಡುವುದಿಲ್ಲ. ಬದಲಾಗಿ ಅವನಿಗೆ ತನ್ನ ಪ್ರಭುವನ್ನು ಭೇಟಿಯಾಗಲಿಕ್ಕಿದೆ ಎಂದು ಸಂತೋಷವಾಗುತ್ತದೆ. ಅವನು ದುಷ್ಕರ್ಮಿಯಾಗಿದ್ದರೆ ಮರಣವನ್ನು ಭಯಪಡುತ್ತಾನೆ. ಏಕೆಂದರೆ ಅವನು ಅಲ್ಲಾಹನ ಕ್ರೋಧಕ್ಕೆ ಗುರಿಯಾಗಲಿದ್ದಾನೆಂದು ಅವನಿಗೆ ತಿಳಿಯುತ್ತದೆ."

**(ಬುಖಾರಿ, ಮಾಲಿಕ್, ನಸಾಈ, ತಿರ್ಮಿದಿ)**

ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹತ್ತು ಮಂದಿ ಕುಳಿತಿದ್ದರು. ಅವರ ಪೈಕಿ ನಾನೂ ಒಬ್ಬನಾಗಿದ್ದೆ. ಅನ್ಸಾರ್‌ಗಳ ಪೈಕಿ ಒಬ್ಬರು ಎದ್ದು ನಿಂತು ಕೇಳಿದರು: "ಅಲ್ಲಾಹನ ಸಂದೇಶವಾಹಕರೇ! ಅತ್ಯಧಿಕ ಬುದ್ಧಿವಂತ ಮತ್ತು ಚತುರ ವ್ಯಕ್ತಿ ಯಾರು?" ಪ್ರವಾದಿ(ಸ) ಹೇಳಿದರು: "ಮರಣವನ್ನು ಅತ್ಯಧಿಕ ಸ್ಮರಿಸುವವನು ಮತ್ತು ಅದಕ್ಕಾಗಿ ಅತ್ಯಧಿಕ ಸಿದ್ಧತೆ ಮಾಡುವವನು. ಇಂಥವರೇ ಬುದ್ಧಿವಂತ ವ್ಯಕ್ತಿಗಳಾಗಿದ್ದಾರೆ. ಅವರು ಇಹ-ಪರಗಳ ಗೌರವ ಮತ್ತು ವಿಜಯವನ್ನು ಹೊಂದುತ್ತಾರೆ.

**(ವರದಿ: ಹ. ಇಬ್ನು ಉಮರ್(ರ) - ತಬ್ರಾನೀ)**

**2. ಮರಣದ ವೇಳೆ ಅಲ್ಲಾಹನಿಂದ ಕ್ಷಮೆಯನ್ನು ನಿರೀಕ್ಷಿಸುವುದು**

ಪ್ರವಾದಿ(ಸ) ತಮ್ಮ ನಿಧನಕ್ಕಿಂತ ಮೂರು ದಿನ ಮುಂಚೆ ಹೀಗೆ ಹೇಳಿದ್ದರು:

"ತಿಳಿಯಿರಿ! ಅಲ್ಲಾಹನಲ್ಲಿ ಶುಭ ನಿರೀಕ್ಷೆ ಇಟ್ಟುಕೊಂಡ ಸ್ಥಿತಿಯಲ್ಲಲ್ಲದೆ ನಿಮ್ಮ ಪೈಕಿ ಯಾವ ವ್ಯಕ್ತಿಗೂ ಮರಣ ಬಾರದಿರಲಿ."

**(ವರದಿ: ಹ. ಜಾಬಿರ್(ರ) - ಮುಸ್ಲಿಮ್, ಅಹ್ಮದ್,**
**ಇಬ್ನುಮಾಜಃ, ಅಬೂದಾವೂದ್, ಬೈಹಕಿ)**

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಅಲ್ಲಾಹನು ಹೇಳುತ್ತಾನೆ, ನಾನು ನನ್ನ ದಾಸನ ನಿರೀಕ್ಷೆಯ ಜತೆಗಿರುತ್ತೇನೆ. (ಅರ್ಥಾತ್: ಅವನು ನನ್ನಿಂದ ನಿರೀಕ್ಷಿಸುವ ವ್ಯವಹಾರವನ್ನೇ ನಾನು ಅವನ ಜತೆ ಮಾಡುವೆನು) ಅವನು ನನ್ನಲ್ಲಿ ಶುಭ ನಿರೀಕ್ಷೆಯಿಟ್ಟರೆ ಅದರಿಂದ ಅವನಿಗೇ ಪ್ರಯೋಜನವಾಗುವುದು. ಅವನು ನನ್ನಲ್ಲಿ ಕೆಟ್ಟ ನಿರೀಕ್ಷೆಯಿಟ್ಟರೆ ಅದರಿಂದ ಅವನಿಗೇ ನಷ್ಟವಾಗುವುದು."

**(ವರದಿ: ಹ. ಅಬೂಹುರೈರಾ(ರ) - ಬುಖಾರಿ, ಮುಸ್ಲಿಮ್, ಅಹ್ಮದ್)**

**3. ಮರಣವನ್ನು ಬಯಸದಿರುವುದು**

ಯಾವುದೇ ಕಾಯಿಲೆ, ಬಡತನ ಅಥವಾ ಸಂಕಷ್ಟದ ಕಾರಣ ಮರಣವನ್ನು ಬಯಸಬಾರದು.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರೂ ಅವನಿಗೆ ಬರುವ ಸಂಕಷ್ಟಗಳಿಗಾಗಿ ಮರಣವನ್ನು ಬಯಸಬಾರದು. ಒಂದು ವೇಳೆ ಅವನಿಗೆ ಮರಣವನ್ನು ಬಯಸುವುದು ಅನಿವಾರ್ಯವಾದರೆ ಅವನು ಈ ರೀತಿ ಪ್ರಾರ್ಥಿಸಲಿ. ಓ ಅಲ್ಲಾಹ್! ನನ್ನ ಪಾಲಿಗೆ ಜೀವನ ಉತ್ತಮವಾಗಿರುವ ತನಕ ನನ್ನನ್ನು ಬದುಕಿಸು ಮತ್ತು ನನ್ನ ಪಾಲಿಗೆ ಮರಣ ಉತ್ತಮವಾದಾಗ ನನಗೆ ಮರಣ ನೀಡು."

**(ವರದಿ: ಹ. ಅನಸ್(ರ) - ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂದಾವೂದ್, ನಸಾಈ, ತಿರ್ಮಿದಿ, ಇಬ್ನುಮಾಜಃ)**

ಮರಣವನ್ನು ಬಯಸದಿರುವುದರ ಯುಕ್ತಿಯನ್ನು ಕೆಲವು ಹದೀಸ್‌ಗಳಲ್ಲಿ ವಿವರಿಸಲಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರೂ ಮರಣವನ್ನು ಬಯಸದಿರಲಿ. ಒಂದು ವೇಳೆ ಅವನು ಪಾಪಿಯಾಗಿದ್ದರೆ ತನ್ನ ಪಾಪಕ್ಕೆ ಕ್ಷಮೆ ಯಾಚಿಸುವನು ಮತ್ತು ಪುಣ್ಯವಂತನಾಗಿದ್ದರೆ ಮತ್ತಷ್ಟು ಪುಣ್ಯಕಾರ್ಯಗಳನ್ನು ಮಾಡುವನು."

**(ವರದಿ: ಹ. ಅಬೂಹುರೈರಾ(ರ) - ಬುಖಾರಿ, ಮುಸ್ಲಿಮ್, ಅಹ್ಮದ್, ಬೈಹಕಿ, ನಸಾಈ)**

ಒಬ್ಬನು ಪ್ರವಾದಿ(ಸ) ಅವರಲ್ಲಿ ಈ ರೀತಿ ವಿಚಾರಿಸಿದನು: "ಓ ಅಲ್ಲಾಹನ ಸಂದೇಶ ವಾಹಕರೇ! ಅತ್ಯುತ್ತಮ ವ್ಯಕ್ತಿ ಯಾರು?" ಆಗ ಪ್ರವಾದಿ(ಸ) ಹೇಳಿದರು: "ಯಾರ ಆಯುಷ್ಯ ದೀರ್ಘವೂ ಕರ್ಮಗಳು ಉತ್ತಮವೂ ಆಗಿರುವುದೋ ಅವನು." ಆ ವ್ಯಕ್ತಿ ಪುನಃ ಕೇಳಿದನು, "ಅತ್ಯಂತ ಕೆಟ್ಟ ವ್ಯಕ್ತಿ ಯಾರು?" "ಯಾರ ಆಯುಷ್ಯ ದೀರ್ಘವೂ ಕರ್ಮಗಳು ಕೆಟ್ಟವೂ ಆಗಿರುವವೋ ಅವನು." **(ವರದಿ: ಹ. ಅಬೂಬಕರ್(ರ) - ಅಹ್ಮದ್, ತಿರ್ಮಿದಿ)**

## 4. ಆತ್ಮಹತ್ಯೆ ನಿಷಿದ್ಧ

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಯಾರು ಕಬ್ಬಿಣದ ಚೂರಿಯಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಾನೋ ಅವನಿಗೆ ನರಕಾಗ್ನಿಯಲ್ಲಿ ಅದೇ ಕಬ್ಬಿಣದ ಚೂರಿಯಿಂದ ಶಿಕ್ಷಿಸಲಾಗುವುದು."

**(ವರದಿ: ಹ. ಸಾಬಿತ್ ಬಿನ್ ದಹ್ಹಾಕ್(ರ) - ಬುಖಾರಿ)**

"ಯಾರು ತನ್ನ ಕತ್ತು ಹಿಸುಕಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೋ ಅವನು ನರಕದಲ್ಲೂ ತನ್ನ ಕತ್ತು ಹಿಸುಕುವನು. ಯಾರು ಭರ್ಚಿಯಿಂದ ಇರಿದು ಆತ್ಮಹತ್ಯೆ ಮಾಡುತ್ತಾನೋ ಅವನು ನರಕದಲ್ಲೂ ತನಗೆ ಭರ್ಚಿಯಿಂದ ಇರಿಯುವನು."

**(ವರದಿ: ಹ. ಅಬೂಹುರೈರಾ(ರ) - ಬುಖಾರಿ)**

**5. ಮರಣದ ವೇಳೆ ಏನು ಮಾಡಬೇಕು?**

**(i) 'ಕಲಿಮಃ' ಹೇಳಿ ಕೊಡುವುದು**

ಒಬ್ಬನ ಅಂತ್ಯ ಘಳಿಗೆ ಸಮೀಪಿಸಿದಾಗ ಅವನಿಗೆ 'ಕಲಿಮಃ' ಹೇಳುತ್ತಿರುವಂತೆ ಬೋಧಿಸಬೇಕು.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಮರಣ ಶಯ್ಯೆಯಲ್ಲಿರುವವರಿಗೆ 'ಲಾ ಇಲಾಹ ಇಲ್ಲಲ್ಲಾಹ್' ಬೋಧಿಸುತ್ತಿರಿ." **(ವರದಿ: ಹ. ಅಬೂ ಸಈದ್ ಖುದ್ರೀ(ರ) - ಅಹ್ಮದ್, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ, ಬೈಹಕಿ, ಇಬ್ನುಮಾಜಃ)**

ನಾನು ಪ್ರವಾದಿಯವರಿಂದ(ಸ) ಒಂದು ವಚನವನ್ನು ಕೇಳಿದೆ. ಆದರೆ ನಾನದನ್ನು (ನೀವು ಅದರ ಬಗ್ಗೆ ತಪ್ಪು ಭರವಸೆ ಇರಿಸಬಾರದು ಎಂದು) ಈ ತನಕ ಬಹಿರಂಗ ಪಡಿಸಿರಲಿಲ್ಲ.

ಪ್ರವಾದಿ(ಸ) ಹೀಗೆ ಹೇಳಿದ್ದರು:

"ಯಾರ ಬಾಯಿಯಿಂದ ಹೊರಡುವ ಕೊನೆಯ ವಚನವು 'ಲಾ ಇಲಾಹ ಇಲ್ಲಲ್ಲಾಹ್' ಆಗಿರುವುದೋ ಅವನು ಸ್ವರ್ಗವನ್ನು ಪ್ರವೇಶಿಸಿದನು."

**(ವರದಿ: ಹ. ಮುಆದ್ ಬಿನ್ ಜಬಲ್(ರ) - ಅಹ್ಮದ್, ಅಬೂದಾವೂದ್)**

ಇಮಾಮ್ ನವವೀ(ರ) ಅವರು ಹೀಗೆ ಹೇಳಿರುವರು:

"ಈ ರೀತಿ ಮರಣಾಸನ್ನ ವ್ಯಕ್ತಿಗೆ 'ಕಲಿಮಃ' ಬೋಧಿಸುವುದು ಎಲ್ಲ ಇಮಾಮ್‌ಗಳ ಪ್ರಕಾರವೂ ಉತ್ತಮವಾಗಿದೆ. ಆದರೆ 'ಲಾ ಇಲಾಹ ಇಲ್ಲಲ್ಲಾಹ್' ಪಠಿಸುವಂತೆ ಅವನನ್ನು ಒತ್ತಾಯಪಡಿಸಬಾರದು. ಅನ್ಯಥಾ ನೋವು ಅಥವಾ ಗಾಬರಿಯಿಂದ ಅವನಿಗೆ ಅದು ಅಪ್ರಿಯವೆನಿಸಬಹುದು ಅಥವಾ ಅವನ ಬಾಯಿಯಿಂದ ಏನಾದರೂ ಆಕ್ಷೇಪಾರ್ಹ ಮಾತು ಹೊರಡಬಹುದು. ಒಮ್ಮೆ ಅವನು 'ಲಾ ಇಲಾಹ ಇಲ್ಲಲ್ಲಾಹ್' ಎಂದು ಪಠಿಸಲು ಆರಂಭಿಸಿದರೆ ಅವನು ಬೇರೇನಾದರೂ ಮಾತು ಹೇಳುವ ತನಕ ಪುನಃ ಅದನ್ನು ಬೋಧಿಸುವ ಅಗತ್ಯವಿಲ್ಲ. ಅವನು ಬೇರೇನಾದರೂ ಮಾತಾಡಿದರೆ ಪುನಃ ಅವನಿಗೆ 'ಲಾ ಇಲಾಹ ಇಲ್ಲಲ್ಲಾಹ್' ಜ್ಞಾಪಿಸುವುದು ಒಳ್ಳೆಯದು. ಇದರಿಂದ ಅವನ ಕೊನೆಯ ವಚನ ಅದಾಗಬಹುದು." **(ನೈಲುಲ್ ಔತಾರ್ ಭಾಗ-3, ಪುಟ: 22)**

**(ii) ಸೂರಃ ಯಾಸೀನ್ ಪಠಿಸುವುದು**

ಪ್ರವಾದಿ(ಸ) ಹೇಳಿದರು:

"ಸೂರಃ ಯಾಸೀನ್ ಕುರ್‌ಆನಿನ ಹೃದಯವಾಗಿದೆ. ಅದನ್ನು ಯಾರು ಅಲ್ಲಾಹನ ಮೆಚ್ಚುಗೆ ಮತ್ತು ಪರಲೋಕದ ಮೋಕ್ಷಕ್ಕಾಗಿ ಪಠಿಸುತ್ತಾನೋ ಅವನನ್ನು ಕ್ಷಮಿಸಲಾಗುತ್ತದೆ. ಅದನ್ನು ನಿಮ್ಮ ಪೈಕಿ ಮರಣ ಹೊಂದುವವರ ಮುಂದೆ ಪಠಿಸಿರಿ."

**(ವರದಿ: ಹ. ಮುಅಕ್ಕಲ್ ಬಿನ್ ಯಸಾರ್(ರ) - ಅಹ್ಮದ್, ಅಬೂದಾವೂದ್, ನಸಾಈ)**

(iii) ಪ್ರಾರ್ಥನೆ

ಪ್ರವಾದಿ(ಸ) ಅವರ ಆತ್ಮವು ಶರೀರದಿಂದ ಬೇರ್ಪಡುತ್ತಿದ್ದಾಗ ಅವರ ಬಳಿ ನೀರಿನ ಒಂದು ತಂಬಿಗೆ ಇತ್ತು. ಪ್ರವಾದಿ(ಸ) ಅದರಲ್ಲಿ ಕೈ ಹಾಕಿ ತಮ್ಮ ಮುಖಕ್ಕೆ ಅದನ್ನು ಸವರುತ್ತಲೂ ಈ ರೀತಿ ಪ್ರಾರ್ಥಿಸುತ್ತಲೂ ಇದ್ದರು:

اَللّٰهُمَّ اَعِنِّى عَلٰى سَكَرَاتِ الْمَوْتِ

"ಅಲ್ಲಾಹುಮ್ಮ ಅಇನ್ನೀ ಅಲಾ ಸಕರಾತಿಲ್ ಮೌತ್"

(ಓ ಅಲ್ಲಾಹ್! ಮರಣದ ಸಂಕಷ್ಟವನ್ನು ಸಹಿಸುವಲ್ಲಿ ನನಗೆ ನೆರವಾಗು)

(ವರದಿ: ಹ. ಆಯಿಶಾ(ರ) - ಅಹ್ಮದ್, ನಸಾಈ, ತಿರ್ಮಿದಿ, ಇಬ್ನುಮಾಜಃ)

(iv) ಕಣ್ಣುಗಳನ್ನು ಮುಚ್ಚಿ ಬಿಡುವುದು

ಪ್ರವಾದಿ(ಸ) ಈ ರೀತಿ ಹೇಳಿರುವರು:

"ನೀವು ನಿಮ್ಮ ಮೃತರ ಬಳಿ ಹೋದಾಗ ಅವರ ಕಣ್ಣುಗಳನ್ನು ಮುಚ್ಚಿಬಿಡಿ. ಏಕೆಂದರೆ ದೃಷ್ಟಿಯು ಆತ್ಮದ ಹಿಂದೆ ಹೊರಟು ಹೋಗಿರುತ್ತದೆ. (ಆದ್ದರಿಂದ ಅದನ್ನು ತೆರೆದಿಡುವುದರಿಂದ ಏನೂ ಪ್ರಯೋಜನವಿಲ್ಲ) ಹಾಗೂ ಉತ್ತಮ ಮಾತು ಹೇಳಿ (ಅರ್ಥಾತ್: ಮೃತರ ಮೋಕ್ಷಕ್ಕಾಗಿ ಪ್ರಾರ್ಥಿಸಿರಿ) ಏಕೆಂದರೆ ಮೃತರ ಮನೆಯವರು ಹೇಳುವುದಕ್ಕೆಲ್ಲಾ ದೇವಚರರು 'ಆಮೀನ್' ಎನ್ನುತ್ತಾರೆ."

(ವರದಿ: ಹ. ಶದ್ದಾದ್ ಬಿನ್ ಔಸ್(ರ) - ಅಹ್ಮದ್, ಇಬ್ನುಮಾಜಃ, ತಬ್ರಾನೀ, ಹಾಕಿಮ್)

(v) ಕಿಬ್ಲಾಭಿಮುಖವಾಗಿ ಮಲಗಿಸುವುದು

ಹ. ಬರಾಅ್ ಬಿನ್ ಮಅರೂರ್(ರ) ಅವರು ತಮ್ಮ ಅಂತಿಮ ಕ್ಷಣ ಬಂದಾಗ ತಮ್ಮನ್ನು ಕಿಬ್ಲಾಭಿಮುಖವಾಗಿ ಮಲಗಿಸಬೇಕೆಂದು ಉಯಿಲು ಮಾಡಿದ್ದರು. ಪ್ರವಾದಿ(ಸ) ಅವರಿಗೆ ಇದು ತಿಳಿದಾಗ ಅವರು ಈ ರೀತಿ ಹೇಳಿದರು: "ಅವರು ಪ್ರಕೃತಿಗೆ ಅನುಗುಣವಾದ ಕಾರ್ಯ ಮಾಡಿದರು." (ಬೈಹಕಿ, ಹಾಕಿಮ್)

(vi) ಮೃತದೇಹಕ್ಕೆ ಬಟ್ಟೆ ಹೊದಿಸುವುದು

ಪ್ರವಾದಿ(ಸ) ಅವರು ನಿಧನರಾದಾಗ ಅವರ ಶರೀರವನ್ನು ಒಂದು ಯಮನೀ ಚಾದರದಿಂದ ಮುಚ್ಚಲಾಯಿತು. (ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್)

## 6. ಮೃತದೇಹವನ್ನು ಚುಂಬಿಸುವುದು

ಹ. ಆಯಿಶಾ(ರ) ಅವರು ವರದಿ ಮಾಡಿರುವಂತೆ ಹ. ಅಬೂಬಕರ್ ಸಿದ್ದೀಕ್(ರ) ಅವರು ಪ್ರವಾದಿ(ಸ) ಅವರ ಪಾರ್ಥಿವ ಶರೀರದ ಮೇಲೆ ಹೊದಿಸಲಾಗಿದ್ದ ಚದ್ದರವನ್ನು ಸರಿಸಿ ಅವರ ಮುಖವನ್ನು ಚುಂಬಿಸಿದ್ದರು. (ಬುಖಾರಿ, ಅಹ್ಮದ್, ನಸಾಈ)

ಹ. ಅಬೂಬಕರ್(ರ) ಅವರ ಈ ಕೃತ್ಯವನ್ನು ಯಾವ ಸಹಾಬಿಯೂ ಆಕ್ಷೇಪಿಸಿರಲಿಲ್ಲ. ಆದ ಕಾರಣ ಮಯ್ಯಿತನ್ನು ಚುಂಬಿಸುವುದು ಧರ್ಮಸಮ್ಮತವೆಂಬ ಬಗ್ಗೆ ಸಹಾಬಿಗಳಲ್ಲಿ ಒಮ್ಮತಾಭಿಪ್ರಾಯವಿದೆ ಎಂದು ಇಮಾಮ್ ಶೌಕಾನೀ(ರ) ಬರೆದಿರುವರು.

(ನೈಲುಲ್ ಔತಾರ್ ಭಾಗ - 3, ಪುಟ: 27)

**7. 'ಇನ್ನಾಲಿಲ್ಲಾಹಿ...' ಹೇಳುತ್ತಿರುವುದು**

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಒಬ್ಬ ದಾಸನಿಗೆ ಯಾವುದಾದರೂ ಸಂಕಷ್ಟ ಒದಗಿದರೆ ಹಾಗೂ ಅವನು ಆಗ

إِنَّا لِلّٰهِ وَإِنَّا إِلَيْهِ رَاجِعُونَ، اَللّٰهُمَّ أْجُرْنِي فِي مُصِيبَتِي وَاخْلُفْلِي خَيْرًا مِنْهَا

"ಇನ್ನಾಲಿಲ್ಲಾಹಿ ವಇನ್ನಾ ಇಲೈಹಿ ರಾಜಿಊನ್. ಅಲ್ಲಾಹುಮ್ಮ ಅಜುರ್ನೀ ಫೀ ಮುಸೀಬತೀ ವಖ್‌ಲುಫ್‌ಲೀ ಖೈರಂಮಿನ್‌ಹಾ"

(ನಾವು ಅಲ್ಲಾಹನಿಗೇ ಸೇರಿದವರು ಮತ್ತು ಅವನ ಕಡೆಗೆ ಮರಳಿ ಹೋಗಲಿರುವೆವು. ಓ ಅಲ್ಲಾಹ್! ನನ್ನ ಈ ಸಂಕಷ್ಟದಲ್ಲಿ ನನಗೆ ಪುಣ್ಯವನ್ನು ದಯಪಾಲಿಸು ಮತ್ತು ನನಗೆ ಅದರ ಬದಲು ಉತ್ತಮ ವಸ್ತುವನ್ನು ದಯಪಾಲಿಸು) ಎಂದು ಹೇಳಿದರೆ ಅಲ್ಲಾಹನು ಅವನಿಗೆ ಪುಣ್ಯವನ್ನೂ ಉತ್ತಮ ಬದಲಿಯನ್ನೂ ದಯಪಾಲಿಸದೆ ಇರುವುದಿಲ್ಲ.

(ವರದಿ: ಹ. ಸಲ್ಮಾ(ರ) - ಮುಸ್ಲಿಮ್, ಅಹ್ಮದ್)

**8. ಸಾಲದ ಸಂದಾಯ**

ಮೃತರ ಮೇಲೆ ಸಾಲವಿದ್ದರೆ ಮರಣಕ್ಕಿಂತ ಮುಂಚೆ ಅಥವಾ ಮರಣವಾದ ತಕ್ಷಣ ಅದರ ಸಂದಾಯದ ವ್ಯವಸ್ಥೆ ಮಾಡಬೇಕು.

ಪ್ರವಾದಿ(ಸ) ಹೀಗೆ ಹೇಳಿರುವರು:

"ಸತ್ಯವಿಶ್ವಾಸಿಯ ಪ್ರಾಣವು ಅವನ ಸಾಲದ ಜತೆ ತೂಗಾಡುತ್ತಿರುತ್ತದೆ - ಅದು ಅವನ ಕಡೆಯಿಂದ ಸಂದಾಯ ಮಾಡಲ್ಪಡುವ ತನಕ."

(ವರದಿ; ಹ. ಅಬೂಹುರೈರಾ(ರ), ಅಹ್ಮದ್, ಇಬ್ನುಮಾಜಃ, ತಿರ್ಮಿದಿ)

**9. ಬಂಧು ಮಿತ್ರರಿಗೆ ಸುದ್ದಿ ಮುಟ್ಟಿಸುವುದು**

ಯಾರಾದರೂ ತೀರಿಕೊಂಡಾಗ ಅವರ ಬಂಧು ಮಿತ್ರರು ಮತ್ತು ಪರಿಚಿತರು ಅವನ ಅಂತ್ಯಕ್ರಿಯೆಯಲ್ಲಿ ಭಾಗವಹಿಸಲು ಅನುಕೂಲವಾಗುವಂತೆ ಅವರಿಗೆ ಅದರ ಸುದ್ದಿ ಮುಟ್ಟಿಸುವುದು ಒಳ್ಳೆಯದು.

ನಜ್ಜಾಶೀ ದೊರೆಯು ತೀರಿಕೊಂಡಾಗ ಅವರ ಮರಣದ ವಾರ್ತೆಯನ್ನು ಪ್ರವಾದಿ(ಸ) ಜನರಿಗೆ ತಿಳಿಸಿದರು. ಅವರನ್ನು ಈದ್‌ಗಾಹ್‌ದ ಕಡೆಗೆ ಕರೆದುಕೊಂಡು ಹೋಗಿ ಅವರು

ನಾಲ್ಕು ಪಂಕ್ತಿಗಳನ್ನು ಮಾಡಿ ನಾಲ್ಕು ತಕ್ಬೀರ್‌ಗಳೊಂದಿಗೆ ಜನಾಝಾಃ ನಮಾಝ್ ಮಾಡಿಸಿದರು. (ವರದಿ: ಹ. ಅಬೂಹುರೈರಾ(ರ) - ಬುಖಾರಿ, ಮುಸ್ಲಿಮ್)

ಮೂತಾ ಯುದ್ಧದಲ್ಲಿ ಹ. ಜಾಫರ್ ಬಿನ್ ಅಬೀತಾಲಿಬ್(ರ), ಹ. ಝೈದ್ ಬಿನ್ ಹಾರಿಸ್(ರ) ಮತ್ತು ಅಬ್ದುಲ್ಲಾ ಬಿನ್ ರವಾಹಃ(ರ) ಅವರು ಹುತಾತ್ಮರಾದಾಗ ಪ್ರವಾದಿ(ಸ) ಅದನ್ನು ಜನರಿಗೆ ತಿಳಿಸಿದರು.

(ವರದಿ: ಹ. ಅನಸ್(ರ) - ಬುಖಾರಿ, ಮುಸ್ಲಿಮ್, ನಸಾಈ, ಬೈಹಕಿ)

## 10. ಶೋಕಾಚರಣೆ

ಮೃತರಿಗಾಗಿ ಕಣ್ಣೀರಿಳಿಸುವುದು ಮತ್ತು ರೋದಿಸುವುದು ಧರ್ಮಸಮ್ಮತವಾಗಿದೆ. ಆದರೆ ಅದರ ಜತೆ ಎದೆ ಬಡಿದುಕೊಳ್ಳುವುದು, ಕೆನ್ನೆಗೆ ಬಡಿಯುವುದು, ಬಟ್ಟೆಯನ್ನು ಹರಿದು ಹಾಕುವುದು, ಮುಖವನ್ನು ಪರಚುವುದು, ಕೂದಲನ್ನು ಕೆದರಿಸುವುದು ಇತ್ಯಾದಿಗಳೆಲ್ಲವೂ ನಿಷಿದ್ಧವಾಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"(ಮೃತರಿಗಾಗಿ ಅಳುತ್ತಾ) ಬಟ್ಟೆ ಹರಿದು ಹಾಕುವ, ಕೆನ್ನೆಗೆ ಬಡಿದುಕೊಳ್ಳುವ ಮತ್ತು ಅಜ್ಞಾನ ಕಾಲದಂತಹ ವಿಲಾಪ ಮಾಡುವ ವ್ಯಕ್ತಿ ನಮ್ಮವನಲ್ಲ."

(ವರದಿ: ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) - ಬುಖಾರಿ, ಮುಸ್ಲಿಮ್, ಅಹ್ಮದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಬೈಹಕಿ)

ಪ್ರವಾದಿ(ಸ) ಅವರ ಪುತ್ರಿ(ಹ. ಝೈನಬ್‌ರ)ಯ ಮಗ ಮರಣ ವೇದನೆ ಅನುಭವಿಸುತ್ತಿದ್ದರು. ಅವರನ್ನು ಎತ್ತಿಕೊಂಡು ಹೋಗಿ ಪ್ರವಾದಿವರ್ಯರ(ಸ) ಮುಂದಿರಿಸ ಲಾಯಿತು. ಅವರ ಕಣ್ಣುಗಳಿಂದ ಕಣ್ಣೀರಿಳಿಯ ತೊಡಗಿತು. ಹ. ಸಅದ್(ರ), "ಪ್ರವಾದಿ ವರ್ಯರೇ(ಸ)! ಇದೇನು?" ಎಂದು ವಿಚಾರಿಸಿದರು. ಆಗ ಪ್ರವಾದಿ(ಸ) ಹೇಳಿದರು: "ಇದು ಅಲ್ಲಾಹನು ತನ್ನ ದಾಸರ ಹೃದಯದಲ್ಲಿರಿಸಿದ ಕರುಣೆಯಾಗಿದೆ ಮತ್ತು ಅಲ್ಲಾಹನು ಕರುಣೆ ಮಾಡುವವರ ಮೇಲೆಯೇ ಕರುಣೆ ತೋರುತ್ತಾನೆ."

(ವರದಿ: ಹ. ಉಸಾಮ ಬಿನ್ ಝೈದ್(ರ) - ಬುಖಾರಿ, ಮುಸ್ಲಿಮ್)

ಪ್ರವಾದಿವರ್ಯರ(ಸ) ಪುತ್ರ ಇಬ್ರಾಹೀಮ್(ರ) ಅವರು ಮರಣ ಶಯ್ಯೆಯಲ್ಲಿದ್ದಾಗ ಪ್ರವಾದಿ(ಸ) ಅಲ್ಲಿಗೆ ಆಗಮಿಸಿದರು. ಅವರ ಕಣ್ಣುಗಳಿಂದ ಕಣ್ಣೀರಿಳಿಯತೊಡಗಿತು. ಹ. ಅಬ್ದುರ್ರಹ್ಮಾನ್ ಬಿನ್ ಔಫ್(ರ), "ಪ್ರವಾದಿವರ್ಯರೇ! ತಾವೂ ಅಳುವುದೇ?" ಎಂದು ಪ್ರಶ್ನಿಸಿದರು. ಆಗ ಪ್ರವಾದಿ(ಸ) ಹೇಳಿದರು, "ಓ ಔಫ್‌ರ ಪುತ್ರರೇ? ಇದು ಕರುಣೆಯಾಗಿದೆ." ತರುವಾಯ ಹೀಗೆ ಹೇಳಿದರು: "ಕಣ್ಣು ಕಣ್ಣೀರಿಳಿಸುತ್ತದೆ. ಮನಸ್ಸು ದುಃಖತಪ್ತವಾಗುತ್ತದೆ. ಆದರೆ ನಾವು ನಮ್ಮ ಪ್ರಭು ಮೆಚ್ಚುವ ಮಾತನ್ನೇ ಆಡುತ್ತೇವೆ. ಓ ಇಬ್ರಾಹೀಮ್! ನಾವು ನಿನ್ನ ವಿರಹದಿಂದ ದುಃಖಿತರಾಗಿದ್ದೇವೆ." (ವರದಿ: ಹ. ಅನಸ್(ರ) - ಬುಖಾರಿ)

## 11. ಮಹಿಳೆಯ ಶೋಕಾಚರಣೆ

ಮಹಿಳೆಯು ತನ್ನ ಪತಿಯ ಹೊರತು ಇತರ ಬಂಧುಗಳಾದ ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ, ಮಗ-ಮಗಳು ಇವರ ಪೈಕಿ ಯಾರಾದರೂ ತೀರಿಕೊಂಡರೆ ಮೂರು ದಿನಗಳ ತನಕ ಶೃಂಗಾರಾದಿಗಳನ್ನು ತೊರೆದು ಶೋಕಾಚರಿಸಬಹುದು. ಆದರೆ ಅದಕ್ಕಿಂತ ಹೆಚ್ಚು ಶೋಕಾಚರಣೆ ಮಾಡುವ ಅನುಮತಿ ಆಕೆಗಿಲ್ಲ. ಪತಿಯ ನಿಧನಕ್ಕೆ ಆಕೆ ನಾಲ್ಕು ತಿಂಗಳು ಮತ್ತು ಹತ್ತು ದಿನಗಳ ತನಕ ಶೋಕಾಚರಿಸಬೇಕು.

ಪ್ರವಾದಿ(ಸ) ಮಿಂಬರ್‌ನ ಮೇಲೆ ಖುತ್‌ಬಾ (ಪ್ರವಚನ) ನೀಡುತ್ತಾ ಈ ರೀತಿ ಹೇಳಿದುದನ್ನು ನಾನು ಕೇಳಿದ್ದೇನೆ.

"ಅಲ್ಲಾಹನ ಮೇಲೆ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುವ ಯಾವ ಮಹಿಳೆಗೂ ಮೂರು ದಿನಗಳಿಗಿಂತ ಹೆಚ್ಚು ಶೋಕಾಚರಣೆ ಮಾಡುವುದು ಧರ್ಮಸಮ್ಮತವಲ್ಲ. ಆದರೆ ಆಕೆ ತನ್ನ ಪತಿಯ ನಿಧನಕ್ಕೆ ನಾಲ್ಕು ತಿಂಗಳು ಹತ್ತು ದಿನಗಳ ತನಕ ಶೋಕಾಚರಿಸಬೇಕು.

**(ವರದಿ: ಹ. ಝೈನಬ್ ಬಿನ್ತಿ ಜಹಶ್(ರ) - ಬುಖಾರಿ, ಮುಸ್ಲಿಮ್, ಅಹ್ಮದ್, ಮಾಲಿಕ್)**

## 12. ಸಹನೆ ವಹಿಸುವುದು

ಮಹಿಳೆಯರಿಗೆ ಉಪದೇಶ ನೀಡುತ್ತಾ ಒಮ್ಮೆ ಪ್ರವಾದಿ(ಸ) ಈ ರೀತಿ ಹೇಳಿದರು:

"ಒಬ್ಬ ಮಹಿಳೆಯ ಮೂವರು ಮಕ್ಕಳು ತೀರಿ ಹೋಗಿ ಆಕೆ ಆ ಬಗ್ಗೆ ಸಹನೆ ವಹಿಸಿದರೆ ಅವರು ಆಕೆಗೆ ನರಕದಿಂದ ಮುಕ್ತಿಯ ಹೇತುವಾಗುವರು." ಆಗ ಓರ್ವ ಮಹಿಳೆ ಕೇಳಿದರು: "ಮತ್ತು ಇಬ್ಬರು ಮಕ್ಕಳು ತೀರಿಕೊಂಡರೆ?" ಆಗ ಪ್ರವಾದಿ(ಸ) "ಇಬ್ಬರು ಮಕ್ಕಳು ತೀರಿಕೊಂಡಾಗಲೂ" ಎಂದರು.

**(ವರದಿ: ಹ. ಅಬೂ ಸಈದ್ ಖುದ್ರೀ(ರ) - ಬುಖಾರಿ, ಮುಸ್ಲಿಮ್)**

ಪ್ರವಾದಿ(ಸ) ಹೇಳಿದರು:

"ಸಹನೆಯು ಪ್ರಥಮ ಆಘಾತದ ವೇಳೆಯಲ್ಲಾಗಿದೆ."

**(ವರದಿ: ಹ. ಅನಸ್(ರ) - ಬುಖಾರಿ)**

ಅರ್ಥಾತ್: ಸಹನೆಯ ಪುಣ್ಯ ಸಿಗಬೇಕಾದರೆ ವ್ಯಕ್ತಿಗೆ ಆಘಾತವಾದ ಕೂಡಲೇ ಅವನು ಸಹನೆ ವಹಿಸಬೇಕು. ಅನ್ಯಥಾ ಮತ್ತೆ ನಿಧಾನವಾಗಿ ಎಲ್ಲರೂ ಸಹನೆ ವಹಿಸದೆ ಇರುವುದಿಲ್ಲ.

ಸಂಕಷ್ಟ ಎದುರಾದಾಗ ಎರಡು ರಕಅತ್ ನಮಾಝ್ ಮಾಡುವುದು ಕೂಡಾ ಒಳ್ಳೆಯದು. ಪ್ರವಾದಿ(ಸ) ಏನಾದರೂ ಕಷ್ಟದ ಕೆಲಸಕ್ಕೆ ಮುಂದಾದಾಗ ಹಾಗೆ ಮಾಡುತ್ತಿದ್ದರು.

**(ವರದಿ: ಹ. ಹುಝೈಫ(ರ) - ಅಬೂದಾವೂದ್)**

## 13. ಮೃತನ ಅಂತ್ಯ ಸಂಸ್ಕಾರದಲ್ಲಿ ತ್ವರೆ ಮಾಡುವುದು

ಯಾರಾದರೂ ನಿಧನರಾದರೆ ಅವನ ಕಫನ್, ಮಯ್ಯಿತ್ ನಮಾಝ್ ಮತ್ತು ದಫನದ ಕಾರ್ಯಗಳನ್ನು ಆದಷ್ಟು ಶೀಘ್ರ ಮಾಡಬೇಕು. ಅದರಲ್ಲಿ ವಿನಾಕಾರಣ ವಿಳಂಬ ಮಾಡುವುದು ಸರಿಯಲ್ಲ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಮೂರು ಕಾರ್ಯಗಳಲ್ಲಿ ತಡ ಮಾಡಬೇಡಿರಿ. 1) ನಮಾಝ್-ಅದು ಸಮಯ ವಾದಾಗ. 2) ಅಂತ್ಯ ಸಂಸ್ಕಾರ - ಮರಣವಾದಾಗ 3) ವಿಧವೆಯ ಪುನರ್ವಿವಾಹ- ಆಕೆಗೆ ಸೂಕ್ತ ವರ ಸಿಕ್ಕಿದಾಗ."

**(ವರದಿ: ಹ. ಅಲೀ(ರ) - ಅಹ್ಮದ್, ಇಬ್ನುಮಾಜಃ, ತಿರ್ಮಿದಿ, ಹಾಕಿಮ್, ಇಬ್ನು ಹಿಬ್ಬಾನ್)**

## 14. ಮೃತನ ಕೆಡುಕನ್ನು ಕಡೆಗಣಿಸಿ, ಒಳಿತನ್ನು ಮಾತ್ರ ಹೇಳುವುದು

ಪ್ರವಾದಿ(ಸ) ಹೀಗೆ ಹೇಳಿರುವರು:

"ಒಬ್ಬ ಮುಸ್ಲಿಮನು ಮೃತನಾದರೆ ಮತ್ತು ನಾಲ್ಕು ಮಂದಿ ಮುಸ್ಲಿಮರು ಅವನು ಒಳ್ಳೆಯವನೆಂಬ ಬಗ್ಗೆ ಸಾಕ್ಷಿ ಹೇಳಿದರೆ ಅಲ್ಲಾಹನು ಅವನನ್ನು ಸ್ವರ್ಗದಲ್ಲಿ ಪ್ರವೇಶ ಗೊಳಿಸುವನು." ಆಗ ಸಹಾಬಿಗಳು ಕೇಳಿದರು, "ಮೂವರು ಸಾಕ್ಷಿ ಹೇಳಿದರೆ?" ಆಗ ಪ್ರವಾದಿ(ಸ), "ಮೂವರು ಸಾಕ್ಷಿ ಹೇಳಿದರೂ ಸರಿ" ಎಂದರು. ಸಹಾಬಿಗಳು "ಇಬ್ಬರು ಸಾಕ್ಷಿ ಹೇಳಿದರೆ" ಎಂದು ಕೇಳಿದಾಗ ಪ್ರವಾದಿ(ಸ) "ಇಬ್ಬರು ಸಾಕ್ಷಿ ಹೇಳಿದರೂ" ಎಂದರು. ಅವರು ಒಬ್ಬನ ಕುರಿತು ಪ್ರವಾದಿವರ್ಯರಲ್ಲಿ(ಸ) ವಿಚಾರಿಸಲಿಲ್ಲ.

**(ವರದಿ: ಹ. ಉಮರ್(ರ) - ಬುಖಾರಿ, ಅಹ್ಮದ್, ತಿರ್ಮಿದಿ, ನಸಾಈ, ಇಬ್ನು ಶೀಬಾ, ಬೈಹಕಿ)**

"ಮೃತರನ್ನು ದೂಷಿಸದಿರಿ. ಏಕೆಂದರೆ ಅವರು ತಾವು ಲೋಕದಲ್ಲಿ ಮಾಡಿದುದರ (ಕರ್ಮಗಳ) ಕಡೆಗೆ ತಲುಪಿದರು. ನೀವು ಅವರನ್ನು ದೂಷಿಸುವುದರಿಂದ ಅವರಿಗೇನೂ ಪ್ರಯೋಜನ ಮಾಡಲಾರಿರಿ."

**(ವರದಿ: ಹ. ಆಯಿಶಾ(ರ) - ಬುಖಾರಿ, ಅಹ್ಮದ್, ನಸಾಈ, ಬೈಹಕಿ)**

•••

# ಮಯ್ಯಿತ್ ಸ್ನಾನ ಮಾಡಿಸುವುದು

## 1. ವಿಧಿ

ಒಬ್ಬ ಮುಸ್ಲಿಮನು ತೀರಿಕೊಂಡರೆ ಅವನನ್ನು ಸ್ನಾನ ಮಾಡಿಸುವುದು 'ಫರ್ಝ್ ಕಿಫಾಯ' ಆಗಿದೆ. ಅಂದರೆ ಕೆಲವರು ನಿರ್ವಹಿಸಿದರೆ ಎಲ್ಲ ಕಡೆಯಿಂದ ಸಂದಾಯ ವಾಗುವ ಸಾಮೂಹಿಕ ಕಡ್ಡಾಯ ವಿಧಿ. ಈ ವಿಷಯ ಪ್ರವಾದಿವರ್ಯರ(ಸ) ಮಾತು-

ಕೃತಿಗಳೆರಡರಿಂದಲೂ ಸಾಬೀತಾಗುತ್ತದೆ. ಸಮುದಾಯದಲ್ಲಿ ಈ ವಿಷಯದ ಬಗ್ಗೆ ಹೆಚ್ಚಿನಂಶ ಒಮ್ಮತಾಭಿಪ್ರಾಯವಿದೆ.

('ಹಜ್ಜತುಲ್ ವಿದಾಅ್'ನ ಸಂದರ್ಭದಲ್ಲಿ) ಒಬ್ಬ ವ್ಯಕ್ತಿ ಪ್ರವಾದಿ(ಸ) ಅವರ ಜತೆಗಿದ್ದನು. ಆತನನ್ನು ಅವನ ಒಂಟೆಯು ತುಳಿದು ಹಾಕಿ ಸಾಯಿಸಿತು. ಆಗ ಅವನು ಇಹ್ರಾಮ್ ಕಟ್ಟಿದ ಸ್ಥಿತಿಯಲ್ಲಿದ್ದನು. ಪ್ರವಾದಿ(ಸ) ಹೇಳಿದರು: "ಆತನಿಗೆ ನೀರು ಮತ್ತು ಬೋರೆ ಎಲೆಯಿಂದ ಸ್ನಾನ ಮಾಡಿಸಿ ಮತ್ತು ಅವನ ಉಟ್ಟ ಬಟ್ಟೆಯನ್ನೇ ಕಫನ್ ಮಾಡಿ ತೊಡಿಸಿ. ಅವನಿಗೆ ಸುಗಂಧ ಹಚ್ಚಬೇಡಿರಿ ಮತ್ತು ತಲೆಯ ಮೇಲೆ ಬಟ್ಟೆ ಹಾಕದಿರಿ. ಏಕೆಂದರೆ ಅವನು ಕಿಯಾಮತ್ ದಿನದಂದು 'ಲಬ್ಬೈಕ್' ಹೇಳುತ್ತಾ ಎದ್ದೇಳುವನು."

**(ವರದಿ: ಹ. ಇಬ್ನು ಅಬ್ಬಾಸ್(ರ) - ಮುಸ್ಲಿಮ್, ಅಹ್ಮದ್, ನಸಾಈ, ಇಬ್ನು ಹಿಬ್ಬಾನ್)**

ಇದೇ ರೀತಿ ಪ್ರವಾದಿವರ್ಯರ(ಸ) ಮಗಳು ಹ. ಝೈನಬ್(ರ) ನಿಧನರಾದಾಗ ಅವರಿಗೆ ಸ್ನಾನ ಮಾಡಿಸುವಂತೆ ಪ್ರವಾದಿ(ಸ) ಆದೇಶಿಸಿದರು. **(ಬುಖಾರಿ, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಅಹ್ಮದ್, ಬೈಹಕಿ)**

## 2. ಸ್ನಾನ ಮಾಡಿಸುವುದರ ಪುಣ್ಯ

ಹ. ಮುಆವಿಯಾ ಬಿನ್ ಖದೀಜ್(ರ) ಹೇಳಿರುವರು: ಯಾವ ವ್ಯಕ್ತಿ ಒಂದು ಮಯ್ಯಿತ್‌ಗೆ ಸ್ನಾನ ಮಾಡಿಸಿ, ಅದಕ್ಕೆ ಕಫನ್ ತೊಡಿಸಿ ಅದರ ಅಂತಿಮ ಯಾತ್ರೆಯಲ್ಲಿ ಭಾಗವಹಿಸುತ್ತಾನೋ ಅವನು ಮರಳುವಾಗ ಅವನ ಪಾಪಗಳು ಕ್ಷಮಿಸಲ್ಪಟ್ಟಿರುತ್ತವೆ.

**(ಅಹ್ಮದ್)**

## 3. ಸ್ನಾನ ಯಾರು ಮಾಡಿಸಬೇಕು?

ಯಾವ ಮುಸ್ಲಿಮನೂ ಮಯ್ಯಿತ್‌ಗೆ ಸ್ನಾನ ಮಾಡಿಸಬಹುದು. ಆದರೆ ಮಯ್ಯಿತ್‌ನೊಂದಿಗೆ ಅತ್ಯಂತ ಹತ್ತಿರದ ಸಂಬಂಧ ಉಳ್ಳವನು ಸ್ನಾನ ಮಾಡಿಸುವುದು ಉತ್ತಮ. ಒಂದು ವೇಳೆ ಅವನಿಗೆ ಸ್ನಾನ ಮಾಡಿಸುವ ಕ್ರಮ ತಿಳಿಯದಿದ್ದರೆ ಧರ್ಮನಿಷ್ಠ ಮತ್ತು ಪ್ರಾಮಾಣಿಕರಾದವರು ಯಾರಾದರೂ ಸ್ನಾನ ಮಾಡಿಸಬಹುದು.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಯಾವಾತನು ಒಂದು ಮಯ್ಯಿತ್‌ನ ಸ್ನಾನ ಮಾಡಿಸಿದನೋ ಮತ್ತು ಅದರಲ್ಲಿ ಪ್ರಾಮಾಣಿಕತೆಯನ್ನು ಪಾಲಿಸಿದನೋ (ಅರ್ಥಾತ್: ಶರೀಅತ್‌ನ ಪ್ರಕಾರ ಸ್ನಾನ ಮಾಡಿಸಿದನೋ) ಮತ್ತು ಆತನಿಗೆ ಮಯ್ಯಿತ್‌ನ ಬಗ್ಗೆ ಏನಾದರೂ ಅಪ್ರಿಯ ವಿಷಯ ತಿಳಿದರೆ ಅದನ್ನು ಬಹಿರಂಗಪಡಿಸಲಿಲ್ಲವೋ ಅವನು ತನ್ನ ಪಾಪಗಳಿಂದ, ಅವನ ತಾಯಿ ಅವನಿಗೆ ಜನ್ಮ ನೀಡಿದ ದಿನದ ಹಾಗೆ, ಮುಕ್ತನಾಗುತ್ತಾನೆ. ನಿಮ್ಮ ಪೈಕಿ ಮಯ್ಯಿತ್‌ನೊಂದಿಗೆ ಹತ್ತಿರದ ಸಂಬಂಧ ಇರುವವರು ಅದಕ್ಕೆ ಸ್ನಾನ ಮಾಡಿಸಬೇಕು - ಅವನಿಗೆ

ಅದರ ತಿಳುವಳಿಕೆ ಇದ್ದರೆ. ಒಂದು ವೇಳೆ ಅವನಿಗೆ ತಿಳಿಯದಿದ್ದರೆ ನೀವು ಯಾರನ್ನು ಧರ್ಮನಿಷ್ಠ ಮತ್ತು ಪ್ರಾಮಾಣಿಕನೆಂದು ಪರಿಗಣಿಸುತ್ತೀರೋ ಅವನು ಸ್ನಾನ ಮಾಡಿಸಲಿ."

(ವರದಿ: ಹ. ಆಯಿಶಾ(ರ) - ಅಹ್ಮದ್, ಬೈಹಕಿ, ತಬ್ರಾನೀ)

ಪ್ರಖ್ಯಾತ ಹನಫೀ ವಿದ್ವಾಂಸ ಅಲ್ಲಾಮಾ ಇಬ್ನು ಹಮಾಮ್(ರ) ಅವರ ಪ್ರಕಾರ ಮಯ್ಯಿತ್ ಸ್ನಾನ ಮಾಡಿಸಿದುದಕ್ಕೆ ಮಜೂರಿ ಪಡೆಯುವುದು ನಿಷಿದ್ಧ.

(ಫತ್‌ಹುಲ್ ಕದೀರ್ ಸಂಪುಟ - 1, ಪುಟ: 282)

**4. ಪತಿ-ಪತ್ನಿಯರು ಪರಸ್ಪರರ ಮೃತದೇಹಕ್ಕೆ ಸ್ನಾನ ಮಾಡಿಸುವುದು**

ಪುರುಷರು ಮಡಿದರೆ ಪುರುಷರೇ ಸ್ನಾನ ಮಾಡಿಸುವುದು ಮತ್ತು ಸ್ತ್ರೀಯರು ಮಡಿದರೆ ಸ್ತ್ರೀಯರೇ ಸ್ನಾನ ಮಾಡಿಸುವುದು ಸಾಮಾನ್ಯ ಕ್ರಮ. ಆದರೆ ಪತ್ನಿಯು ತನ್ನ ಪತಿಯ ಮೃತದೇಹಕ್ಕೆ ಸ್ನಾನ ಮಾಡಿಸುವುದು ಧರ್ಮಸಮ್ಮತವಾಗಿದೆ.

ಹ. ಆಯಿಶಾ(ರ) ಈ ರೀತಿ ಹೇಳಿರುವರು:

"ಗತಿಸಿ ಹೋದ ಕಾಲವು ಹಿಂದಕ್ಕೆ ಬರುತ್ತಿದ್ದರೆ, ಪ್ರವಾದಿವರ್ಯರಿಗೆ(ಸ) ಅವರ ಪತ್ನಿಯರೇ ಸ್ನಾನ ಮಾಡಿಸುತ್ತಿದ್ದರು." (ಅಹ್ಮದ್, ಅಬೂದಾವೂದ್)

ಹ. ಅಬೂಬಕರ್ ಸಿದ್ದೀಕ್(ರ) ತಮ್ಮ ನಿಧನದ ಬಳಿಕ ತಮಗೆ ತಮ್ಮ ಪತ್ನಿ ಅಸ್ಮಾ ಬಿಂತ್ ಉಮೈಸ್(ರ) ಸ್ನಾನ ಮಾಡಿಸಬೇಕೆಂದು ಅಂತ್ಯೋಪದೇಶ ಮಾಡಿದ್ದರು. ಹ. ಅಸ್ಮಾ(ರ) ಉಪವಾಸ ಆಚರಿಸುತ್ತಿದ್ದರು. ಹ. ಅಬೂಬಕರ್(ರ) ಅವರು ಆಣೆ ಹಾಕಿ ಅವರಿಗೆ ಉಪವಾಸ ವ್ರತ ತೊರೆಯುವಂತೆ ಆದೇಶಿಸಿದ್ದರು. ಹ. ಅಸ್ಮಾ(ರ) ಸ್ನಾನ ಮುಗಿಸಿದಾಗ ಅವರಿಗೆ ಹ. ಅಬೂಬಕರ್(ರ) ಅವರ ಆಣೆ ನೆನಪಾಯಿತು. ಅವರು "ನಾನು ಇಂದು ಅವರ ಆಣೆಗೆ ವಿರುದ್ಧ ವರ್ತಿಸಲಾರೆ" ಎಂದರು.

ಹ. ಜಾಬಿರ್(ರ) ಅವರು ಕೂಡಾ ಅವರ ಪತ್ನಿಯೇ ಅವರ ಮಯ್ಯಿತ್ ಸ್ನಾನ ಮಾಡಿಸಬೇಕೆಂದು ಉಯಿಲು ಮಾಡಿದ್ದರು.

ಹ. ಅಬೂ ಮೂಸಾ ಅಶ್‌ಅರೀ(ರ) ಅವರ ಮೃತದೇಹವನ್ನು ಅವರ ಪತ್ನಿ ಉಮ್ಮು ಅಬ್ದುಲ್ಲಾ(ರ) ಸ್ನಾನ ಮಾಡಿಸಿದರು. ಇದೇ ರೀತಿ ಪತಿಯೂ ತನ್ನ ಪತ್ನಿಯ ಮೃತದೇಹಕ್ಕೆ ಸ್ನಾನ ಮಾಡಿಸಬಹುದು.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಓ ಆಯಿಶಾ(ರ), ನೀನು ನನಗಿಂತ ಮುಂಚೆ ಮೃತಪಟ್ಟರೆ ನಾನು ನಿನಗೆ ಮಯ್ಯಿತ್ ಸ್ನಾನ ಮಾಡಿಸುವೆ." (ವರದಿ: ಹ. ಆಯಿಶಾ(ರ) - ಅಹ್ಮದ್, ಇಬ್ನುಮಾಜಃ)

ಹ. ಫಾತಿಮಾ(ರ) ಅವರು ನಿಧನರಾದಾಗ ಅವರಿಗೆ ಹ. ಅಲೀ(ರ) ಸ್ನಾನ ಮಾಡಿಸಿದರು. (ಮುಸ್ನದ್ ಇಮಾಮ್ ಶಾಫಿಈ(ರ), ಬೈಹಕಿ)

ಇದು ಇಮಾಮ್ ಶಾಫಿಈ(ರ) ಸಹಿತ ಹೆಚ್ಚಿನ ಇಮಾಮರ ಅಭಿಮತ. ಆದರೆ ಇಮಾಮ್ ಅಬೂಹನೀಫಾರವರ(ರ) ಪ್ರಕಾರ ಪತಿಯ ಮೃತದೇಹವನ್ನು ಪತ್ನಿ ಸ್ನಾನ ಮಾಡಿಸಬಹುದು. ಆದರೆ ಪತ್ನಿಯ ಮೃತದೇಹವನ್ನು ಪತಿ ಸ್ನಾನ ಮಾಡಿಸಕೂಡದು.

**5. ಪುರುಷರು ಹೆಣ್ಣು ಶಿಶುವಿನ ಮತ್ತು ಸ್ತ್ರೀಯರು ಗಂಡು ಶಿಶುವಿನ ಮಯ್ಯಿತ್ ಸ್ನಾನ ಮಾಡಿಸುವುದು**

ಪುರುಷರು ಹೆಣ್ಣು ಶಿಶುವಿನ ಮಯ್ಯಿತ್ ಮತ್ತು ಸ್ತ್ರೀಯರು ಗಂಡು ಶಿಶುವಿನ ಮಯ್ಯಿತ್‌ಗೆ ಸ್ನಾನ ಮಾಡಿಸಬಹುದೆಂಬುದು ಸರ್ವಸಮ್ಮತ ವಿಷಯ.

**6. ಮಯ್ಯಿತ್‌ಗೆ ಸ್ನಾನ ಮಾಡಿಸಲು ಯೋಗ್ಯರಾದ ಯಾರೂ ಇಲ್ಲದಿರುವಾಗ?**

ಒಬ್ಬ ಸ್ತ್ರೀ ನಿಧನಳಾಗಿ ಆಕೆಯ ಸ್ನಾನ ಮಾಡಿಸಲು ಸ್ತ್ರೀಯರು ಇಲ್ಲದಿದ್ದರೆ ಹಾಗೂ ಆಕೆಯ ಪತಿಯಾಗಲೀ ವಿವಾಹ ನಿಷಿದ್ಧ ಬಂಧುಗಳಾಗಲೀ ಇಲ್ಲದಿದ್ದರೆ ಆ ಮಹಿಳೆಗೆ ತಯಮ್ಮುಮ್ ಮಾಡಿಸಬೇಕು. ಸ್ನಾನ ಮಾಡಿಸಬಾರದು. ಅದೇ ರೀತಿ ಪುರುಷನೊಬ್ಬ ತೀರಿಕೊಂಡು ಅಲ್ಲಿ ಬೇರೆ ಪುರುಷರಿಲ್ಲದೆ ಹೋದರೆ ಆತನಿಗೂ ತಯಮ್ಮುಮ್ ಮಾಡಿಸಬೇಕು. ಸ್ನಾನ ಮಾಡಿಸಬಾರದು. ಇದು ಹನಫೀ ಕ್ರಮ.

ಆದರೆ ಇಮಾಮ್ ಶಾಫಿಈ(ರ) ಅವರ ಪ್ರಕಾರ ಆಗಲೂ ಸ್ನಾನ ಮಾಡಿಸಬೇಕು. ಆದರೆ ಮಯ್ಯಿತ್‌ಗೆ ಬಟ್ಟೆಯ ಮೇಲೆಯೇ ಸ್ನಾನ ಮಾಡಿಸಬೇಕು. ಮಯ್ಯಿತ್‌ಗೆ ಕೈ ತಾಗದಂತೆ ಕೈಗೆ ಬಟ್ಟೆ ಸುತ್ತಿಕೊಳ್ಳಬೇಕು.

**7. ಮಯ್ಯಿತ್‌ಗೆ ಸ್ನಾನ ಮಾಡಿಸುವ ಕ್ರಮ**

ಈ ವಿಷಯದಲ್ಲಿ ಎಲ್ಲ ಇಮಾಮರುಗಳೂ ಅನುಸರಿಸುವ ಅಧಿಕೃತ ಮತ್ತು ಪ್ರಸಿದ್ಧ ಹದೀಸ್ ಉಮ್ಮು ಅತಿಯ್ಯ(ರ) ಅವರದ್ದಾಗಿದೆ. ಅದರಲ್ಲಿ ಅವರು ಈ ರೀತಿ ಹೇಳಿರುವರು:

"ನಾವು ಪ್ರವಾದಿವರ್ಯರ(ಸ) ಮಗಳಾದ ಹ. ಝೈನಬ್‌ರ(ರ) ಸ್ನಾನ ಮಾಡಿಸುತ್ತಿದ್ದೆವು. ಪ್ರವಾದಿ(ಸ) ನಮ್ಮ ಬಳಿಗೆ ಬಂದು ಹೀಗೆ ಹೇಳಿದರು: ಆಕೆಗೆ ನೀರು ಮತ್ತು ಬೋರೆ ಎಲೆಗಳಿಂದ ಮೂರು, ಐದು ಅಥವಾ ಅಗತ್ಯವಿದ್ದರೆ ಅದಕ್ಕಿಂತ ಹೆಚ್ಚು ಸಲ ಸ್ನಾನ ಮಾಡಿಸಿ. ಕೊನೆಯ ಸ್ನಾನದಲ್ಲಿ ಸ್ವಲ್ಪ ಕರ್ಪೂರವನ್ನೂ ಹಾಕಿ. ನೀವು ಸ್ನಾನ ಮಾಡಿಸಿ ಆದ ಬಳಿಕ ನನಗೆ ತಿಳಿಸಿ." ಅಂತೆಯೇ ನಾವು ಸ್ನಾನ ಮಾಡಿಸಿ ಆದ ಬಳಿಕ ಪ್ರವಾದಿವರ್ಯರಿಗೆ(ಸ) ತಿಳಿಸಿದೆವು. ಅವರು ತಮ್ಮ ಲುಂಗಿಯನ್ನು ನಮ್ಮ ಕಡೆಗೆ ಎಸೆಯುತ್ತಾ ಹೀಗೆ ಹೇಳಿದರು:" ಇದರಿಂದ ಆಕೆಯ ಮೈಯನ್ನು ಸುತ್ತಿರಿ" (ಅರ್ಥಾತ್: ಕಫನ್ ಮಾಡಿರಿ), ಅನಂತರ ನಾವು ಮಯ್ಯಿತ್‌ನ ತಲೆ ಬಾಚಿದೆವು ಮತ್ತು ಮೂರು ಜಡೆಗಳನ್ನು ಮಾಡಿದೆವು.

ಇನ್ನೊಂದು ವರದಿಯಲ್ಲಿ ಹೀಗಿದೆ, "(ಜಡೆಗಳನ್ನು ಕಟ್ಟಿ) ನಾವು ಅವುಗಳನ್ನು ಹಿಂದಕ್ಕೆ ಸೊಂಟದ ಕಡೆಗೆ ಮಾಡಿದೆವು. ಮೂರು ಜಡೆಗಳಲ್ಲಿ ಎರಡು ಅವರ ತಲೆಯ ಬಲ ಮತ್ತು ಎಡಭಾಗದ ಕೂದಲಿನದ್ದಾಗಿತ್ತು, ಮತ್ತೊಂದು ನೆತ್ತಿಯ ಕೂದಲಿನದ್ದಾಗಿತ್ತು."

ಇನ್ನೊಂದು ವರದಿಯಲ್ಲಿ ಹ. ಉಮ್ಮು ಅತಿಯ್ಯ(ರ) ಹೀಗೆ ಹೇಳಿರುವರು: "ನಾವು ಪ್ರವಾದಿವರ್ಯರ(ಸ) ಮಗಳಿಗೆ ಸ್ನಾನ ಮಾಡಿಸಿದೆವು. ಆಗ ಪ್ರವಾದಿ(ಸ) ನಮಗೆ ಈ ರೀತಿ ಆಜ್ಞಾಪಿಸಿದರು: 'ಮೂರು ಸಲ ಅವಳನ್ನು ಬೋರೆ ಎಲೆಗಳಿಂದ ಸ್ನಾನ ಮಾಡಿಸಿ. ಅದರಿಂದ ಶುದ್ಧವಾಗದಿದ್ದರೆ ಐದು ಸಲ ಸ್ನಾನ ಮಾಡಿಸಿ. ಐದು ಸಲದಿಂದಲೂ ಶುದ್ಧವಾಗದಿದ್ದರೆ ಅದಕ್ಕಿಂತಲೂ ಹೆಚ್ಚು ಸಲ ಸ್ನಾನ ಮಾಡಿಸಿ.' ಐದು ಸಲಕ್ಕಿಂತ ಹೆಚ್ಚೆಂದರೆ ಏಳು ಸಲ ಸ್ನಾನ ಮಾಡಿಸುವುದೆಂದೇ ನಾವು ಭಾವಿಸಿದ್ದೆವು.'

ಮತ್ತೊಂದು ವರದಿಯಲ್ಲಿ ಹ. ಉಮ್ಮು ಅತಿಯ್ಯ(ರ) ಈ ರೀತಿ ಹೇಳಿರುವರು: "ಪ್ರವಾದಿ(ಸ) ಅವರು ತಮ್ಮ ಮಗಳ ಸ್ನಾನ ಮಾಡಿಸುವಾಗ ಶರೀರದ ಬಲಗಡೆಯ ಅಂಗಗಳಿಂದ ಮತ್ತು ವುಝೂ ಮಾಡುವ ಸ್ಥಳಗಳಿಂದ ಸ್ನಾನ ಮಾಡಿಸಲು ಆರಂಭಿಸಬೇಕೆಂದು ಆಜ್ಞಾಪಿಸಿದರು." (ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಬೈಹಕಿ)

ಈ ಎಲ್ಲ ವರದಿಗಳಿಂದ ವ್ಯಕ್ತವಾಗುವಂತೆ ಮಯ್ಯಿತ್‌ಗೆ ಸ್ನಾನ ಮಾಡಿಸುವಾಗ ಈ ಕೆಳಗಿನ ವಿಷಯಗಳನ್ನು ಗಮನದಲ್ಲಿರಿಸುವುದು ಅಪೇಕ್ಷಣೀಯ.

1. ಶರೀರದ ಬಲಭಾಗದ ಅಂಗಗಳಿಂದ ಸ್ನಾನ ಆರಂಭಿಸಬೇಕು.
2. ವುಝೂ ಮಾಡಿಸಬೇಕು.
3. ಸ್ನಾನ ಮಾಡಿಸುವ ನೀರಿಗೆ ಬೋರೆ ಎಲೆಗಳನ್ನು ಹಾಕಬೇಕು.
4. ಮೂರು ಸಲ ಸ್ನಾನ ಮಾಡಿಸಿ ಶುದ್ಧವಾಗದಿದ್ದರೆ ಐದು ಅಥವಾ ಏಳು ಸಲ ಸ್ನಾನ ಮಾಡಿಸಬೇಕು.
5. ಕೊನೆಯ ಸಲ ಸ್ನಾನ ಮಾಡಿಸುವಾಗ ಕರ್ಪೂರವನ್ನು ಉಪಯೋಗಿಸಬೇಕು.
6. ಮಯ್ಯಿತ್ ಸ್ತ್ರೀಯದ್ದಾಗಿದ್ದರೆ ಸ್ನಾನ ಮಾಡಿಸಿದ ಬಳಿಕ ತಲೆಬಾಚಬೇಕು. ಮೂರು ಜಡೆಗಳನ್ನು ಮಾಡಿ ಅವುಗಳನ್ನು ತಲೆಯ ಹಿಂದೆ ಸೊಂಟದ ಕಡೆಗೆ ಹಾಕಬೇಕು.

ಇದುವೇ ಶಾಫಿಈ ಕ್ರಮವಾಗಿದೆ. ಹನಫೀ ಕ್ರಮದಂತೆ ತಲೆಕೂದಲನ್ನು ಎರಡೂ ಭುಜಗಳ ಮೇಲಿಂದ ತಂದು ಎದೆಯ ಮೇಲೆ ಹಾಕಬೇಕು. ಮೇಲಿನ ಕ್ರಮವು ಹ. ಉಮ್ಮು ಅತಿಯ್ಯ(ರ) ಅವರದ್ದಾಗಿದ್ದು ಅದಕ್ಕೆ ಪ್ರವಾದಿ(ಸ) ಆದೇಶಿಸಿದ್ದರೆಂದು ತಿಳಿದು ಬರುವುದಿಲ್ಲ ಎಂಬುದೇ ಅವರ ತರ್ಕ.

ಮಯ್ಯಿತ್‌ನ್ನು ವುಝೂ ಮಾಡಿಸುವಾಗ ಬಾಯಿ ಮುಕ್ಕಳಿಸಲು ಮತ್ತು ಮೂಗಿನ ರಂಧ್ರಗಳಿಗೆ ನೀರು ತಾಗಿಸಲು ಬೆರಳುಗಳಿಗೆ ವಸ್ತ್ರ ಸುತ್ತಿ ಅದರ ಬಾಯಿ ಮತ್ತು ಮೂಗಿನೊಳಗೆ ಬೆರಳಾಡಿಸಿ ಶುಚಿಗೊಳಿಸಿದರೆ ಸಾಕಾಗುವುದು ಎಂಬುದು ಹನಫೀ ಪಂಡಿತರ ಅಭಿಮತ. ಶಾಫಿಈ ಮತ್ತು ಅಹ್ಲೆ ಹದೀಸ್ ಕ್ರಮದಂತೆ ಬಾಯಿಗೆ ಮತ್ತು ಮೂಗಿಗೆ

ನೀರು ಹಾಕಿ ವುಝೂ ಮಾಡಿಸಬೇಕು. ಒಂದು ವೇಳೆ ಅದು ಸಾಧ್ಯವಾಗದಿದ್ದರೆ ಮೇಲೆ ಹೇಳಿದಂತೆ ಹನಫೀ ಕ್ರಮದಂತೆ ಬೆರಳಿಗೆ ಬಟ್ಟೆ ಸುತ್ತಿ ಮಯ್ಯಿತ್‌ನ ದವಡೆ, ಹಲ್ಲುಗಳು ಮತ್ತು ತುಟಿಯನ್ನು ಸವರಬೇಕು ಮತ್ತು ಮೂಗಿನ ರಂಧ್ರದೊಳಗೆ ಬೆರಳಾಡಿಸಬೇಕು.

### 8. ಮಯ್ಯಿತ್‌ಗೆ ಸ್ನಾನ ಮಾಡಿಸಿದವನು ಸ್ನಾನ ಮಾಡಿಕೊಳ್ಳಬೇಕು

ಪ್ರವಾದಿ(ಸ) ನಾಲ್ಕು ವಿಷಯಗಳಿಗಾಗಿ ಸ್ನಾನ ಮಾಡುತ್ತಿದ್ದರು. 1) ಸಂಭೋಗದ ನಂತರ 2) ಜುಮಾ ದಿವಸ 3) ರಕ್ತನಾಳದಿಂದ ರಕ್ತ ತೆಗೆದ ನಂತರ 4) ಮಯ್ಯಿತ್‌ಗೆ ಸ್ನಾನ ಮಾಡಿಸಿದ ನಂತರ. **(ವರದಿ: ಹ. ಆಯಿಶಾ(ರ) - ಅಬೂದಾವೂದ್)**

ಪ್ರವಾದಿ(ಸ) ಹೀಗೆ ಹೇಳಿರುವರು:

"ಮಯ್ಯಿತ್‌ಗೆ ಸ್ನಾನ ಮಾಡಿಸಿದವನು ಸ್ನಾನ ಮಾಡಿಕೊಳ್ಳಬೇಕು. ಅದನ್ನು ಹೊತ್ತು ಕೊಂಡು ಹೋದವನು ವುಝೂ ಮಾಡಿಕೊಳ್ಳಬೇಕು."

**(ವರದಿ: ಹ. ಅಬೂಹುರೈರಾ(ರ) - ತಿರ್ಮಿದಿ)**

ಈ ಹದೀಸ್‌ನಲ್ಲಿ ಮಯ್ಯಿತ್ ಸ್ನಾನ ಮಾಡಿಸಿದವನು ಸ್ನಾನ ಮಾಡಿಕೊಳ್ಳಬೇಕೆಂದು ಪ್ರವಾದಿ(ಸ) ಆದೇಶಿಸಿರುವರಾದರೂ ಅದು ಕಡ್ಡಾಯವಲ್ಲ, ಐಚ್ಛಿಕವಾಗಿದೆ. ಏಕೆಂದರೆ ಬೇರೆ ಹದೀಸ್‌ಗಳಿಂದ ಮಯ್ಯಿತ್‌ಗೆ ಸ್ನಾನ ಮಾಡಿಸಿದವನು ಸ್ನಾನ ಮಾಡಲೇ ಬೇಕೆಂದಿಲ್ಲ ಎಂದು ತಿಳಿದು ಬರುತ್ತದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ನೀವು ಮಯ್ಯಿತ್‌ಗೆ ಸ್ನಾನ ಮಾಡಿಸಿದಾಗ ನಿಮ್ಮ ಮೇಲೆ ಸ್ನಾನ (ಕಡ್ಡಾಯ) ಇಲ್ಲ. ನಿಮ್ಮ ಮೃತನು ಮಲಿನವಾಗಿ ಸಾಯುವುದಿಲ್ಲ. ಶುದ್ಧವಾಗಿ ಸಾಯುತ್ತಾನೆ. ಆದ್ದರಿಂದ ನೀವು ನಿಮ್ಮ ಕೈಗಳನ್ನು ತೊಳೆದುಕೊಂಡರೆ ಸಾಕು."

**(ವರದಿ: ಹ. ಇಬ್ನು ಅಬ್ಬಾಸ್(ರ) - ಬೈಹಕಿ)**

ಈ ಬಗ್ಗೆ ಎಲ್ಲ ಕರ್ಮಶಾಸ್ತ್ರಗಳ ಒಮ್ಮತವಿದೆ.

### 9. ಹುತಾತ್ಮನಿಗೆ ಸ್ನಾನ ಮಾಡಿಸಲಿಕ್ಕಿಲ್ಲ

ಶತ್ರುಗಳ ಜತೆ ಯುದ್ಧ ಮಾಡುತ್ತಾ ನಿಧನನಾದಂತಹ ಹುತಾತ್ಮನಿಗೆ ಸ್ನಾನ ಮಾಡಿಸಬಾರದು. ಪ್ರವಾದಿ(ಸ) ಅದರಿಂದ ತಡೆದಿರುವರು.

ಉಹುದ್ ಯುದ್ಧದ ದಿವಸ ಪ್ರವಾದಿ(ಸ) ಯುದ್ಧದಲ್ಲಿ ಹುತಾತ್ಮರಾದವರನ್ನೊಮ್ಮೆ ನೋಡಿದರು. ಅನಂತರ ಹೀಗೆ ಹೇಳಿದರು: "ಇವರನ್ನು ಇವರ ರಕ್ತಸಿಕ್ತ ಬಟ್ಟೆಗಳಲ್ಲೇ ಸುತ್ತಿರಿ. ಏಕೆಂದರೆ ನಾನು ಅವರ ಪರವಾಗಿ ಸಾಕ್ಷ್ಯ ವಹಿಸಿರುವೆನು." ಈ ರೀತಿ ಎರಡೆರಡು ಮತ್ತು ಮೂರು-ಮೂರು ಮಂದಿಯನ್ನು ಒಂದೇ ಗೋರಿಯಲ್ಲಿ ದಫನ ಮಾಡಲಾಗುತ್ತಿತ್ತು. ಅವರ ಪೈಕಿ ಅತ್ಯಧಿಕ ಕುರ್‌ಆನ್ ಬಲ್ಲವರು ಯಾರೆಂದು ವಿಚಾರಿಸಲಾಗುತ್ತಿತ್ತು. ಯಾರಿಗೆ

ಹೆಚ್ಚು ಕುರ್‌ಆನ್ ನೆನಪಿದೆ ಎಂದು ತಿಳಿದು ಬರುತ್ತಿತ್ತೋ ಅವರನ್ನು ಗೋರಿಯೊಳಗೆ ಮೊದಲು ಇರಿಸಲಾಗುತ್ತಿತ್ತು. ನನ್ನ ತಂದೆ ಮತ್ತು ಚಿಕ್ಕಪ್ಪನವರನ್ನು ಅಂದು ಒಂದೇ ಗೋರಿಯಲ್ಲಿ ದಫನ ಮಾಡಲಾಗಿತ್ತು.

(ವರದಿ: ಹ. ಜಾಬಿರ್(ರ) - ಬುಖಾರಿ, ನಸಾಈ, ಅಹ್ಮದ್, ಇಬ್ನುಮಾಜಃ, ತಿರ್ಮಿದಿ)

ಉಹುದ್ ಯುದ್ಧದಲ್ಲಿ ಹುತಾತ್ಮರಾದ ಸಹಾಬಿಗಳ ಬಗ್ಗೆ ಪ್ರವಾದಿ(ಸ) ನಮಗೆ ಈ ರೀತಿ ಆದೇಶಿಸಿದ್ದರು: "ಅವರಿಗೆ ಸ್ನಾನ ಮಾಡಿಸಬೇಡಿ. ಏಕೆಂದರೆ ಕಿಯಾಮತ್‌ನ ದಿನ ಅವರ ಗಾಯ ಅಥವಾ ರಕ್ತದಿಂದ ಸುವಾಸನೆ ಹರಡುವುದು."

(ವರದಿ: ಹ. ಜಾಬಿರ್(ರ) - ಬುಖಾರಿ, ಅಹ್ಮದ್,
ಅಬೂದಾವೂದ್, ತಿರ್ಮಿದಿ, ಇಬ್ನುಮಾಜಃ, ಬೈಹಕಿ)

•••

# ಕಫನ್ ಅಥವಾ ಶವವಸ್ತ್ರ

ಮುಸ್ಲಿಮನೊಬ್ಬನು ತೀರಿಕೊಂಡರೆ ಅವನಿಗೆ ಕಫನ್ (ಶವವಸ್ತ್ರ) ತೊಡಿಸಬೇಕಾದುದು 'ಫರ್ಝ್ ಕಿಫಾಯ'(ಸಾಮೂಹಿಕ ವಿಧಿ) ಆಗಿದೆ ಎಂಬುದು ಸರ್ವಸಮ್ಮತ ವಿಧಿ.

(ಅಲ್ ಮುಗ್ನಿ ಭಾಗ - 2, ಪುಟ: 309)

ಸ್ತ್ರೀಯ ಕಫನ್‌ಗೆ ಐದು ಮತ್ತು ಪುರುಷನ ಕಫನ್‌ಗೆ ಮೂರು ಬಟ್ಟೆ ಇರಬೇಕಾದುದು ಸುನ್ನತ್ ಆಗಿದೆ. ಒಂದು ವೇಳೆ ಅಷ್ಟು ಬಟ್ಟೆ ಇಲ್ಲದಿದ್ದರೆ ಎರಡು ಅಥವಾ ಒಂದು ಬಟ್ಟೆಯಲ್ಲೂ ಮಯ್ಯಿತ್‌ಗೆ ಕಫನ್ ತೊಡಿಸಬಹುದು. ಆದರೆ ಅದು ಮಯ್ಯಿತ್‌ನ ಉದ್ದವನ್ನು ಪೂರ್ಣವಾಗಿ ಮುಚ್ಚುವಂತಹ ಬಟ್ಟೆಯಾಗಿರಬೇಕು. ಒಂದು ವೇಳೆ ಬಟ್ಟೆ ಅಷ್ಟು ಉದ್ದ ಇಲ್ಲದಿದ್ದರೆ ತಲೆಯ ಭಾಗವನ್ನು ಪೂರ್ಣವಾಗಿ ಮರೆಸಿ ಕಾಲಿನ ಭಾಗವನ್ನು ಹುಲ್ಲು ಇತ್ಯಾದಿಗಳಿಂದ ಮುಚ್ಚಿ ಬಿಡಬೇಕು.

ಉಹುದ್ ಯುದ್ಧದಲ್ಲಿ ಹ. ಮುಸ್‌ಅಬ್ ಬಿನ್ ಉಮೈರ್(ರ) ಹುತಾತ್ಮರಾದರು. ಅವರ ಕಫನ್‌ಗೆ ಯಾವುದೇ ಬಟ್ಟೆ ಸಿಗಲಿಲ್ಲ. ಒಂದು ಚದ್ದರ ಮಾತ್ರ ಸಿಕ್ಕಿತು. ಅದು ಎಷ್ಟು ಚಿಕ್ಕದಾಗಿತ್ತೆಂದರೆ ಅವರ ತಲೆಯನ್ನು ಮುಚ್ಚಿದರೆ ಕಾಲು ತೆರೆದಿರುತ್ತಿತ್ತು. ಕಾಲನ್ನು ಮುಚ್ಚಿದರೆ ತಲೆ ತೆರೆದಿರುತ್ತಿತ್ತು. ಆಗ ಅವರ ತಲೆಯನ್ನು ಮರೆಸಿ ಕಾಲುಗಳ ಮೇಲೆ 'ಇದ್‌ಖಿರ್' (ಅರೇಬಿಯಾದಲ್ಲಿ ಬೆಳೆಯುವ ಒಂದು ರೀತಿಯ ಸುವಾಸನೆಯ ಹುಲ್ಲು) ಹಾಕಲು ಪ್ರವಾದಿ(ಸ) ನಮಗೆ ಆದೇಶಿಸಿದರು.

(ವರದಿ: ಹ. ಅಬ್ದುರ್ರಹ್ಮಾನ್ ಬಿನ್ ಔಫ್(ರ) - ಬುಖಾರಿ)

ಇದೇ ರೀತಿ ಹ. ಹಮ್‌ಝಾರನ್ನು(ರ) ಕೂಡ ಒಂದು ಸಣ್ಣ ಬಟ್ಟೆಯಲ್ಲಿ ಕಫನ್ ಮಾಡಲಾಯಿತು. (ಬುಖಾರಿ, ಅಹ್ಮದ್)

ಅನಿವಾರ್ಯ ಕಾರಣಗಳಿದ್ದರೆ ಎರಡು ಅಥವಾ ಮೂರು ಮಯ್ಯಿತ್‌ಗಳಿಗೆ ಒಂದೇ ಬಟ್ಟೆಯಿಂದ ಕಫನ್ ಮಾಡಬಹುದು.

ಉಹುದ್ ಯುದ್ಧದಲ್ಲಿ ಹುತಾತ್ಮರು ಹೆಚ್ಚಿದ್ದರು. ಆದ್ದರಿಂದ ಒಂದು, ಎರಡು ಅಥವಾ ಮೂರು ಜನರನ್ನು ಒಂದೇ ಕಫನ್‌ನಲ್ಲಿ ಸುತ್ತಿ ಒಂದೇ ಗೋರಿಯಲ್ಲಿ ದಫನ ಮಾಡಲಾಗುತ್ತಿತ್ತು. (ವರದಿ: ಹ. ಅನಸ್(ರ) - ಅಬೂದಾವೂದ್, ತಿರ್ಮಿದಿ)

## ಕಫನ್ ಮಾಡುವ ಶಿಷ್ಟಾಚಾರಗಳು

### 1. ಉತ್ತಮ ಮತ್ತು ನಿರ್ಮಲ ಬಟ್ಟೆ

ಪ್ರವಾದಿ(ಸ) ಈ ರೀತಿ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ತನ್ನ ಸೋದರನಿಗೆ ಕಫನ್ ತೊಡಿಸುವಾಗ ಉತ್ತಮ ಕಫನ್ ತೊಡಿಸಿರಿ." (ವರದಿ: ಹ. ಜಾಬಿರ್(ರ) - ಮುಸ್ಲಿಮ್)

ಆದರೆ ಉತ್ತಮ ಕಫನ್ ಎಂಬುದರ ಅರ್ಥ ದುಬಾರಿ ಬಟ್ಟೆಯಲ್ಲ. ಏಕೆಂದರೆ ಕಫನ್‌ಗೆ ದುಬಾರಿ ಬಟ್ಟೆ ತೊಡಿಸುವುದರಿಂದ ಪ್ರವಾದಿ(ಸ) ತಡೆದಿರುವರು:

"ಕಫನ್‌ನಲ್ಲಿ ಅತಿರೇಕವೆಸಗದಿರಿ (ದುಬಾರಿ ಬಟ್ಟೆ ಬಳಸದಿರಿ) ಏಕೆಂದರೆ ಅದು ಬಹುಬೇಗನೆ ಕಸಿಯಲ್ಪಡುವುದು (ಅರ್ಥಾತ್: ಕುಂಬಾಗುವುದು)"

(ವರದಿ: ಹ. ಅಲೀ(ರ) - ಅಬೂದಾವೂದ್)

ಕಫನ್‌ಗೆ ಬಟ್ಟೆ ಹೊಸತೇ ಆಗಬೇಕೆಂದಿಲ್ಲ. ಶುಭ್ರವಾದ ಹಳೆಯ ಅಥವಾ ಉಪಯೋಗ ಮಾಡಿದ ಬಟ್ಟೆಯನ್ನೂ ಕಫನ್‌ಗೆ ಬಳಸಬಹುದು. ಈ ಬಗ್ಗೆ ಕರ್ಮಶಾಸ್ತ್ರಜ್ಞರ ಒಮ್ಮತಾಭಿಪ್ರಾಯವಿದೆ. (ಅಲ್ ಫತ್ಹುರ್ರಬ್ಬಾನೀ ಭಾಗ - 7, ಪುಟ: 191)

ಹ. ಅಬೂಬಕರ್ ಸಿದ್ದೀಕ್(ರ) ಅವರ ಮರಣದ ವೇಳೆ ಸಮೀಪಿಸಿದಾಗ ಅವರು ತಾವು ಉಟ್ಟ ಬಟ್ಟೆಯ ಕಡೆಗೆ ಸೂಚಿಸುತ್ತಾ ಹೀಗೆ ಹೇಳಿದರು: "ನನ್ನ ಈ ಬಟ್ಟೆಯನ್ನು ತೊಳೆದು, ಎರಡು ಹೊಸ ಬಟ್ಟೆ ತೆಗೆದು ನನ್ನನ್ನು ಈ ಹಳೆಯ ಮತ್ತು ಹೊಸಬಟ್ಟೆಗಳಿಂದ ಕಫನ್ ಮಾಡಬೇಕು." ಆಗ ಹ. ಆಯಿಶಾ(ರ) ಹೇಳಿದರು, "ಅಪ್ಪಾ! ತಮ್ಮ ಈ ಬಟ್ಟೆಯಂತೂ ಹಳತಾಗಿದೆ." ಆಗ ಹ. ಅಬೂಬಕರ್(ರ) ಹೇಳಿದರು: "ಮೃತನಿಗಿಂತಲೂ ಜೀವಂತ ವ್ಯಕ್ತಿಯೇ ಹೊಸ ಬಟ್ಟೆಗೆ ಹೆಚ್ಚು ಅರ್ಹನಾಗಿದ್ದಾನೆ." (ಬುಖಾರಿ)

### 2. ಬಿಳಿ ವಸ್ತ್ರದಿಂದ ಕಫನ್ ಮಾಡುವುದು

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಉಡುಪಿಗೆ ಬಿಳಿ ಬಟ್ಟೆಗಳನ್ನೇ ಬಳಸಿ. ಏಕೆಂದರೆ ಅದು ನಿಮಗೆ ಅತ್ಯುತ್ತಮ ಬಟ್ಟೆಯಾಗಿದೆ ಮತ್ತು ಅದರಿಂದಲೇ ನಿಮ್ಮ ಮೃತರಿಗೆ ಕಫನ್ ತೊಡಿಸಿರಿ."
(ವರದಿ: ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) - ಅಹ್ಮದ್, ಅಬೂದಾವೂದ್, ತಿರ್ಮಿದಿ)

**3. ಕಫನ್‌ಗೆ ಸುಗಂಧ ಲೇಪಿಸುವುದು ಮತ್ತು ಲೋಬಾನದ ಹೊಗೆ ತಾಗಿಸುವುದು**

ಪ್ರವಾದಿ(ಸ) ಹೀಗೆ ಹೇಳಿರುವರು:

"ನೀವು ನಿಮ್ಮ ಮೃತರಿಗೆ ಹೊಗೆ ತಾಗಿಸುವಾಗ ಮೂರು ಸಲ ಹೊಗೆ ತಾಗಿಸಿರಿ."

(ವರದಿ: ಹ. ಜಾಬಿರ್(ರ) - ಅಹ್ಮದ್, ಬಝ್ಝಾರ್)

ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ಈ ರೀತಿ ಹೇಳುತ್ತಾರೆ: "ಮಯ್ಯಿತ್‌ನ ಸಾಷ್ಟಾಂಗದ ಸ್ಥಾನಗಳಿಗೆ (ಎರಡು ಹಸ್ತಗಳು, ಮೂಗು, ಹಣೆ ಮತ್ತು ಎರಡು ಮೊಣಕಾಲುಗಳು ಮತ್ತು ಎರಡು ಪಾದಗಳ ಮುಂದಿನ ಭಾಗಗಳಿಗೆ) ಕರ್ಪೂರವನ್ನು ಹಚ್ಚಬೇಕು."

(ಬೈಹಕಿ, ಇಬ್ನು ಅಬೀ ಶೀಬಾ)

**4. ಪುರುಷನಿಗೆ ಮೂರು ಬಟ್ಟೆಗಳ ಕಫನ್**

ಪ್ರವಾದಿ(ಸ) ಅವರನ್ನು ಮೂರು ವಸ್ತ್ರಗಳಿಂದ ಕಫನ್ ಮಾಡಲಾಯಿತು. ಅದು ಬಿಳಿ ಬಟ್ಟೆಯಾಗಿದ್ದು 'ಸಹೂಲ್' ಎಂಬಲ್ಲಿ ನೇಯಲ್ಪಟ್ಟ ಹತ್ತಿಯ ಬಟ್ಟೆಯಾಗಿತ್ತು. ಅವುಗಳಲ್ಲಿ ನಿಲುವಂಗಿ ಆಗಲಿ ಮುಂಡಾಸು ಆಗಲಿ ಇರಲಿಲ್ಲ.

(ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್,
ತಿರ್ಮಿದಿ, ಅಹ್ಮದ್, ನಸಾಈ, ಇಬ್ನುಮಾಜಃ)

ಪುರುಷರನ್ನು ಮೂರು ಕವಚಗಳಲ್ಲಿ ಕಫನ್ ಮಾಡುವುದು ಉತ್ತಮ. ಮಯ್ಯಿತನ್ನು ಒಂದು ಅಂಗಿ ಮತ್ತು ಎರಡು ಬಟ್ಟೆಗಳಿಂದಲೂ ಕಫನ್ ಮಾಡಬಹುದು.

ಹ. ಅಬ್ದುಲ್ಲಾ ಬಿನ್ ಅಮ್ರ್ ಬಿನ್ ಆಸ್(ರ) ಹೇಳುತ್ತಾರೆ, "ಮಯ್ಯಿತ್‌ಗೆ ಒಂದು ಅಂಗಿ, ಒಂದು ಲುಂಗಿ ತೊಡಿಸಿ, ಮೂರನೆಯ ಬಟ್ಟೆಯಲ್ಲಿ ಸುತ್ತಬೇಕು."

(ಮುವತ್ತಾ ಇಮಾಮ್ ಮಾಲಿಕ್, ಮುವತ್ತಾ ಇಮಾಮ್ ಮುಹಮ್ಮದ್)

**5. ಸ್ತ್ರೀಗೆ ಐದು ಬಟ್ಟೆಗಳ ಕಫನ್**

ಹ. ಲೈಲಾ ಸಕ್ಫಿಯ(ರ) ಅವರು ವರದಿ ಮಾಡುತ್ತಾರೆ: ಪ್ರವಾದಿ(ಸ) ಅವರ ಮಗಳಾದ ಹ. ಉಮ್ಮು ಕುಲ್ಸೂಮ್‌ರನ್ನು(ರ) ಅವರ ನಿಧನಾನಂತರ ಸ್ನಾನ ಮಾಡಿಸಿದವರಲ್ಲಿ ನಾನೂ ಸೇರಿದ್ದೆ. ಪ್ರವಾದಿ(ಸ) ಮೊದಲು ಒಂದು ಲುಂಗಿ ನೀಡಿದರು, ನಂತರ ಕಮೀಸ್, ನಂತರ ಶಾಲು, ನಂತರ ಚದ್ದರ ಮತ್ತು ಇನ್ನೊಂದು ಬಟ್ಟೆ- ಅದರಲ್ಲಿ ಅವರನ್ನು [ಹ. ಉಮ್ಮು ಕುಲ್ಸೂಮ್(ರ)] ಸುತ್ತಲಾಯಿತು. ಪ್ರವಾದಿ(ಸ) ಬಾಗಿಲ ಬಳಿ ನಿಂತಿದ್ದರು. ಕಫನ್ ಬಟ್ಟೆ ಅವರ ಬಳಿಯಿತ್ತು. ಅವರು ಒಂದೊಂದು ಬಟ್ಟೆಯನ್ನೇ ನಮಗೆ ನೀಡುತ್ತಿದ್ದರು.

(ಅಹ್ಮದ್)

### 6. ಇಹ್ರಾಮ್‌ನಲ್ಲಿರುವವನ ಕಫನ್

ಯಾರಾದರೂ ಹಜ್ಜ್ ಅಥವಾ ಉಮ್ರಾಕ್ಕಾಗಿ ಇಹ್ರಾಮ್ ಕಟ್ಟಿಕೊಂಡಿದ್ದು ಅದೇ ಸ್ಥಿತಿಯಲ್ಲಿ ಅವನು ಮರಣ ಹೊಂದಿದರೆ ಅವನನ್ನು ಸ್ನಾನ ಮಾಡಿಸಿ ಇಹ್ರಾಮ್ ಬಟ್ಟೆಯಲ್ಲೇ ಕಫನ್ ಮಾಡಲಾಗುವುದು. ಅವನ ತಲೆಯನ್ನು ಮುಚ್ಚಬಾರದು ಮತ್ತು ಅವನಿಗೆ ಸುಗಂಧ ದ್ರವ್ಯವನ್ನೂ ಹಚ್ಚಬಾರದು.

ಇದು ಇಮಾಮ್ ಶಾಫಿಈಯವರ(ರ) ಅಭಿಪ್ರಾಯ. ಹನಫೀ ಕ್ರಮದಂತೆ ಇಹ್ರಾಮ್‌ನಲ್ಲಿರುವವನನ್ನೂ ಸಾಮಾನ್ಯ ಮೃತರಂತೆಯೇ ಕಫನ್ ಮಾಡಬೇಕು.

**(ಅಲ್ ಫತ್ಹುರ್ರಬ್ಬಾನೀ ಭಾಗ - 7, ಪುಟ: 191)**

### 7. ಶಹೀದ್(ಹುತಾತ್ಮ)ನ ಕಫನ್

ಯಾರಾದರೂ ಜಿಹಾದ್ ಮಾಡುತ್ತಾ ಯುದ್ಧರಂಗದಲ್ಲೇ ಹುತಾತ್ಮರಾದರೆ ಅವರನ್ನು ಅವರು ಉಟ್ಟ ಬಟ್ಟೆಗಳಲ್ಲೇ ಕಫನ್ ಮಾಡಲಾಗುವುದು. ಈ ಬಗ್ಗೆ ಇಮಾಮರುಗಳಲ್ಲಿ ಒಮ್ಮತಾಭಿಪ್ರಾಯವಿದೆ. **(ಅಲ್ ಫತ್ಹುರ್ರಬ್ಬಾನೀ, ಭಾಗ - 7, ಪುಟ: 186)**

ಹ. ಜಾಬಿರ್ ಬಿನ್ ಅಬ್ದುಲ್ಲಾ(ರ) ವರದಿ ಮಾಡಿರುವಂತೆ ಒಬ್ಬರು (ರಣರಂಗದಲ್ಲಿ ಹೋರಾಡುವಾಗ) ಅವರ ಎದೆ ಅಥವಾ ಹೊಟ್ಟೆಗೆ ಬಾಣ ತಾಗಿತು. ಅವರನ್ನು ಅವರು ಉಟ್ಟಿದ್ದ ಬಟ್ಟೆಗಳಲ್ಲೇ ಕಫನ್ ಮಾಡಲಾಯಿತು. ಆಗ ನಾವು ಪ್ರವಾದಿವರ್ಯರ(ಸ) ಜತೆಗಿದ್ದೆವು. **(ಅಹ್ಮದ್, ಅಬೂದಾವೂದ್, ತಿರ್ಮಿದಿ, ಬೈಹಕಿ)**

ಉಹುದ್‌ನ ದಿವಸ ಹುತಾತ್ಮರಾದವರ ಆಯುಧಗಳನ್ನು ತೆಗೆದಿರಿಸಿ ಅವರನ್ನು ಅವರ ರಕ್ತಸಿಕ್ತ ಬಟ್ಟೆಗಳಲ್ಲೇ ದಫನ್ ಮಾಡಬೇಕೆಂದು ಪ್ರವಾದಿ(ಸ) ಆದೇಶಿಸಿದರು.

**(ವರದಿ: ಹ. ಇಬ್ನು ಅಬ್ಬಾಸ್(ರ) - ಅಹ್ಮದ್, ಅಬೂದಾವೂದ್, ಇಬ್ನುಮಾಜಃ, ಬೈಹಕಿ)**

•••

# ಅಂತಿಮ ಯಾತ್ರೆ

### 1. ವಿಧಿ

ಮಯ್ಯಿತ್‌ಗೆ ಸ್ನಾನ ಮಾಡಿಸುವಂತೆ ಮತ್ತು ಕಫನ್ ಮಾಡಿಸುವಂತೆಯೇ ಅದನ್ನು ಎತ್ತಿಕೊಂಡು ಕಬರಸ್ತಾನಕ್ಕೆ ಹೋಗುವುದು ಕೂಡಾ ಎಲ್ಲಾ ಇಮಾಮರ ಪ್ರಕಾರ ಫರ್ಝ್ ಕಿಫಾಯಃ(ಸಾಮೂಹಿಕ ಕಡ್ಡಾಯ ವಿಧಿ) ಆಗಿದೆ.

**(ಅಲ್ ಫತ್ಹುರ್ರಬ್ಬಾನಿ, ಭಾಗ - 8, ಪುಟ: 11)**

## 2. ಪುಣ್ಯ ಮತ್ತು ಮಹತ್ವ

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಓರ್ವ ಮುಸ್ಲಿಮನ ಮೇಲೆ ಇನ್ನೊಬ್ಬ ಮುಸ್ಲಿಮನಿಗೆ ಐದು ಹಕ್ಕು ಬಾಧ್ಯತೆಗಳಿವೆ. 1. ಸಲಾಮ್‌ಗೆ ಉತ್ತರ ಹೇಳುವುದು 2. ರೋಗಿಯನ್ನು ಸಂದರ್ಶಿಸುವುದು 3. ಮಯ್ಯಿತ್‌ನ ಜತೆ ಹೋಗುವುದು 4. ಆಮಂತ್ರಣವನ್ನು ಸ್ವೀಕರಿಸುವುದು 5. ಸೀನಿದಾಗ 'ಯರ್ಹಮಕಲ್ಲಾಹ್' (ಅಲ್ಲಾಹನು ನಿನ್ನ ಮೇಲೆ ದಯೆ ತೋರಲಿ) ಎನ್ನುವುದು."

(ವರದಿ: ಹ. ಅಬೂಹುರ್ರೈರಾ(ರ) - ಬುಖಾರಿ, ಮುಸ್ಲಿಮ್)

"ಯಾರಾದರೂ ಒಂದು ಮಯ್ಯಿತ್‌ನ ಜನಾಝಾ ನಮಾಝ್ ಮಾಡಿದರೆ ಅವನಿಗೆ ಒಂದು 'ಕೀರಾತ್' ಪುಣ್ಯ ಸಿಗುವುದು ಮತ್ತು ಯಾರಾದರೂ ಅವನ ದಫನ ಕಾರ್ಯ ಆಗುವ ತನಕ ಇದ್ದರೆ ಅವನಿಗೆ ಎರಡು 'ಕೀರಾತ್' ಪುಣ್ಯ ಸಿಗುವುದು." ಸಹಾಬಿಗಳು ಕೇಳಿದರು, "ಅಲ್ಲಾಹನ ಸಂದೇಶವಾಹಕರೇ! 'ಕೀರಾತ್' ಎಂದರೇನು?" ಪ್ರವಾದಿ(ಸ) ಹೇಳಿದರು: ಎರಡು ದೊಡ್ಡ ಪರ್ವತಗಳಷ್ಟು."

(ವರದಿ: ಹ. ಅಬೂಹುರ್ರೈರಾ(ರ) - ಬುಖಾರಿ, ಮುಸ್ಲಿಮ್, ಅಹ್ಮದ್,
ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ)

## 3. ಮಯ್ಯಿತನ್ನು ಶೀಘ್ರವಾಗಿ ಕೊಂಡು ಹೋಗುವುದು

ಮಯ್ಯಿತ್ ಕೊಂಡುಹೋಗುವಲ್ಲಿ ತಡ ಮಾಡಬಾರದು. ಅದನ್ನು ಸಾಮಾನ್ಯಕ್ಕಿಂತ ಅಧಿಕ ವೇಗದಲ್ಲಿ ಕೊಂಡು ಹೋಗಬೇಕು.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ನಿಮ್ಮ ಮಯ್ಯಿತ್‌ಗಳನ್ನು ಬಹುಬೇಗ ಕೊಂಡು ಹೋಗಿ. ಅವನು ಒಳ್ಳೆಯವನಾಗಿದ್ದರೆ ನೀವು ಅವನನ್ನು ಶೀಘ್ರವಾಗಿ ಒಳಿತಿನೆಡೆಗೆ ತಲುಪಿಸುವಿರಿ ಮತ್ತು ಅವನು ಕೆಟ್ಟವನಾಗಿದ್ದರೆ ಅವನಿಂದ ನೀವು ಶೀಘ್ರ ಮುಕ್ತಿ ಪಡೆಯುವಿರಿ ಮತ್ತು ಆದಷ್ಟು ಬೇಗ ಅವನನ್ನು ನಿಮ್ಮ ಹೆಗಲಿಂದ ಇಳಿಸಿ ಬಿಡುವಿರಿ."

(ವರದಿ: ಹ. ಅಬೂ ಹುರ್ರೈರಾ(ರ) - ಬುಖಾರಿ, ಮುಸ್ಲಿಮ್, ಅಹ್ಮದ್
ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಬೈಹಕಿ)

ಈ ಬಗ್ಗೆ ಎಲ್ಲ ಇಮಾಮರ ಒಮ್ಮತವಿದೆ.

## 4. ಮಯ್ಯಿತ್‌ಗೆ ಗೌರವ

ಮಯ್ಯಿತನ್ನು ಎತ್ತುವಾಗ ಮತ್ತು ಕೊಂಡೊಯ್ಯುವಾಗ ಅದಕ್ಕೆ ಅಗೌರವವಾಗದಂತೆ ಜಾಗ್ರತೆ ವಹಿಸಬೇಕು. ಅದನ್ನು ಸಾವಧಾನದಿಂದ ಎತ್ತಬೇಕು.

"ಹ. ಅಬ್ದುಲ್ಲಾ ಇಬ್ನು ಅಬ್ಬಾಸ್(ರ) ಅವರು 'ಶರ್ಫ್' ಎಂಬಲ್ಲಿ (ಪ್ರವಾದಿ ಪತ್ನಿ) ಹ. ಮೈಮೂನ(ರ) ಅವರ ಜನಾಝಾ ನಮಾಝ್‌ಗೆ ನೇತೃತ್ವ ವಹಿಸಿದ ನಂತರ "ನೋಡಿ ಇದು ಹ. ಮೈಮೂನಳ(ರ) ಮಯ್ಯಿತ್ ಆಗಿದೆ. ಅದಕ್ಕೆ ಆಘಾತ ಮತ್ತು ಧಕ್ಕೆ ಆಗದಂತೆ ಜಾಗ್ರತೆ ವಹಿಸಿ" ಎಂದು ಹೇಳಿದರು. (ಮುಸ್ಲಿಮ್, ಅಹ್ಮದ್)

### 5. ಮಯ್ಯಿತನ್ನು ಪುರುಷರೇ ಹೊರಬೇಕು

ಮಯ್ಯಿತ್ ಪುರುಷನದ್ದಾಗಿರಲಿ ಸ್ತ್ರೀಯದ್ದಾಗಿರಲಿ ಅದನ್ನು ಕೇವಲ ಪುರುಷರೇ ಹೊರಬೇಕು. ಮಹಿಳೆಯರು ಹೊರಬಾರದು ಎಂಬ ಬಗ್ಗೆ ವಿದ್ವಾಂಸರಲ್ಲಿ ಒಮ್ಮತಾಭಿಪ್ರಾಯವಿದೆ. (ಅಲ್ ಫತ್ಹುರ್ರಬ್ಬಾನೀ, ಭಾಗ - 8, ಪುಟ: 10)

### 6. ಮಯ್ಯಿತನ್ನು ಹೊರುವ ವಿಧಾನ

ಮಯ್ಯಿತ್ ಹೊರುವ ಎರಡು ವಿಧಾನಗಳಿವೆ.

1) ಶವ ಮಂಚವನ್ನು ಅದರ ನಾಲ್ಕು ಮೂಲೆಗಳಿಂದಲೂ ಎತ್ತುವುದು:

ಮರಣ ಯಾತ್ರೆಯಲ್ಲಿ ಪಾಲ್ಗೊಳ್ಳುವವರು ಶವಮಂಚದ ನಾಲ್ಕು ಮೂಲೆಗಳನ್ನೂ ಎತ್ತಬೇಕು. ಏಕೆಂದರೆ ಅದು ಸುನ್ನತ್ ಆಗಿದೆ. ಅನಂತರ ಬೇಕಾದರೆ (ಇನ್ನೂ ಎತ್ತಿ) ಪುಣ್ಯಗಳಿಸಲಿ ಅಥವಾ ಬಿಟ್ಟು ಬಿಡಲಿ.

(ವರದಿ: ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) - ಇಬ್ನುಮಾಜಃ).

ಅಹ್ಲೆ ಹದೀಸ್ ಮತ್ತು ಹನಫೀಗಳು ಇದು ಉತ್ತಮ ಕ್ರಮವೆನ್ನುತ್ತಾರೆ.

2) ಶವ ಮಂಚದ ಮುಂದಿನ ಭಾಗವನ್ನು ಎರಡೂ ಹೆಗಲುಗಳ ಮಧ್ಯೆ ಇಟ್ಟು ಎತ್ತುವುದು:

ಇಬ್ರಾಹೀಮ್ ಬಿನ್ ಸಅದ್(ರ) ತಮ್ಮ ಅಜ್ಜನಿಂದ ವರದಿ ಮಾಡಿರುವರು. ಅವರು ಹ. ಸಅದ್ ಬಿನ್ ಅಬೀ ವಕ್ಕಾಸ್‌ರನ್ನು(ರ) ಹ. ಅಬ್ದುರ್ರಹ್ಮಾನ್ ಬಿನ್ ಔಫ್‌ರ(ರ) ಮಯ್ಯಿತ್ ಎತ್ತುವುದನ್ನು ನೋಡಿದ್ದರು. ಅವರು ಶವಮಂಚದ ಮುಂದಿನ ಭಾಗವನ್ನು ಮಧ್ಯದಿಂದ ತಮ್ಮ ಎರಡು ಭುಜಗಳಲ್ಲಿ ಎತ್ತಿಕೊಂಡಿದ್ದರು.

ಇದೇ ರೀತಿಯ ವರದಿಯನ್ನು ಇಮಾಮ್ ಶಾಫಿಈ(ರ) ಅವರು ಹ. ಉಸ್ಮಾನ್, ಅಬೂಹುರೈರಾ, ಇಬ್ನು ಝುಬೈರ್ ಮತ್ತು ಇಬ್ನು ಉಮರ್(ರ) ಅವರ ಬಗ್ಗೆಯೂ ಉಲ್ಲೇಖಿಸಿರುವರು. (ಬೈಹಕಿ)

ಶಾಫಿಈಗಳು ಈ ಕ್ರಮವನ್ನು ಉತ್ತಮವೆನ್ನುತ್ತಾರೆ.

### 7. ಶವ ಮಂಚವನ್ನು ಮೂರು ಸಲ ಎತ್ತುವುದು

ಪ್ರವಾದಿ(ಸ) ಈ ರೀತಿ ಹೇಳಿರುವರು:

ಯಾರಾದರೂ ಶವಯಾತ್ರೆಯಲ್ಲಿ ಪಾಲ್ಗೊಂಡು ಅದನ್ನು (ಶವಮಂಚ) ಮೂರು ಬಾರಿ ಎತ್ತಿದರೆ ಆತ ತನ್ನ ಮೇಲಿನ ಮಯ್ಯಿತ್‌ನ ಹಕ್ಕನ್ನು ತೀರಿಸಿದಂತಾಗುತ್ತದೆ.

(ವರದಿ: ಹ. ಅಬೂಹುರೈರಾ(ರ) - ತಿರ್ಮಿದಿ)

## 8. ಶವ ಮಂಚದ ಸುತ್ತಲೂ ನಡೆಯುವುದು

ಶವಮಂಚವನ್ನು ಎತ್ತಿಕೊಂಡು ಕಾಲ್ನಡಿಗೆಯಲ್ಲಿ ಹೋಗುತ್ತಿರುವಾಗ ಅದರಲ್ಲಿ ಪಾಲ್ಗೊಳ್ಳುವವರು ಅದರ ಮುಂದೆ, ಹಿಂದೆ ಹಾಗೂ ಎಡ-ಬಲ ಬದಿಗಳಲ್ಲಿ ನಡೆಯ ಬಹುದಾಗಿದೆ. ಇದು ಎಲ್ಲ ಇಮಾಮರ ಪ್ರಕಾರ ಧರ್ಮಸಮ್ಮತವಾಗಿದೆ. ಆದರೆ ಇಮಾಮ್ ಶಾಫಿಈ(ರ) ಅವರ ಪ್ರಕಾರ ಶವಮಂಚದ ಮುಂದೆ ನಡೆಯುವುದು ಉತ್ತಮ. ಏಕೆಂದರೆ ಪ್ರವಾದಿ(ಸ), ಹ. ಅಬೂಬಕರ್(ರ) ಮತ್ತು ಹ. ಉಮರ್(ರ) ಅವರನ್ನು ಶವಮಂಚದ ಮುಂದೆ ನಡೆಯುತ್ತಿರುವುದನ್ನು ನಾನು ಕಂಡಿದ್ದೇನೆಂದು ಹ. ಅಬ್ದುಲ್ಲಾ ಬಿನ್ ಉಮರ್(ರ) ಹೇಳುತ್ತಾರೆ. (ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ)

## 9. ಶವ ಯಾತ್ರೆಯ ಜತೆ ವಾಹನದಲ್ಲಿ ಹೋಗುವುದು

ಕೆಲವು ಹದೀಸ್‌ಗಳಲ್ಲಿ ಶವಯಾತ್ರೆಯ ಜತೆ ವಾಹನದಲ್ಲಿ ಹೋಗುವುದನ್ನು ನಿಷೇಧಿಸಲಾಗಿದೆ:

"ಪ್ರವಾದಿ(ಸ) ಒಂದು ಶವಯಾತ್ರೆಯಲ್ಲಿ ಕೆಲವು ಮಂದಿ ಕುದುರೆಯ ಮೇಲೇರಿ ಹೋಗುತ್ತಿರುವುದನ್ನು ಕಂಡು ಹೀಗೆ ಹೇಳಿದರು: "ನಿಮಗೆ ನಾಚಿಕೆಯಾಗುವುದಿಲ್ಲವೇ? ಅಲ್ಲಾಹನ ಮಲಕ್‌ಗಳು ಕಾಲ್ನಡಿಗೆಯಲ್ಲಿ ಹೋಗುತ್ತಿದ್ದಾರೆ ಮತ್ತು ನೀವು ಕುದುರೆಯ ಮೇಲೆ ಸವಾರಿ ಮಾಡುತ್ತಿರುವಿರಾ?" (ವರದಿ: ಹ. ಸೌಬಾನ್(ರ) - ತಿರ್ಮಿದಿ, ಇಬ್ನುಮಾಜಃ)

ಇನ್ನು ಕೆಲವು ಹದೀಸ್‌ಗಳಲ್ಲಿ ವಾಹನದಲ್ಲಿ ಹೋಗುವುದಕ್ಕೆ ಅನುಮತಿ ನೀಡಲಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ವಾಹನದಲ್ಲಿರುವವರು ಶವಮಂಚದ ಹಿಂದೆ ಬರಬೇಕು ಮತ್ತು ಕಾಲ್ನಡಿಗೆಯವರು ಅದರ ಮುಂದೆ, ಬಲ ಮತ್ತು ಎಡಭಾಗದಲ್ಲಿ ನಡೆಯಬೇಕು."

(ವರದಿ: ಹ. ಮುಗೀರಾ ಬಿನ್ ಶುಅ್‌ಬಾ(ರ)-ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಬೈಹಕಿ, ಇಬ್ನು ಅಬೀ ಶೀಬಾ)

ಈ ಎರಡೂ ವಿಧದ ಹದೀಸ್‌ಗಳನ್ನು ಮುಂದಿರಿಸಿ, ಎಲ್ಲ ಇಮಾಮರ ಅಭಿಪ್ರಾಯ ವಾಗಿದೆಯೆಂಬುದು ಶವಯಾತ್ರೆಯ ಜತೆ ವಾಹನದಲ್ಲಿ ಹೋಗಬಹುದಾದರೂ ನಡೆದು ಕೊಂಡು ಹೋಗುವುದು ಉತ್ತಮವಾಗಿದೆ ಆದರೆ ಮರಳುವಾಗ ವಾಹನದಲ್ಲಿ ಮರಳಿದರೆ

ಏನೂ ಆಕ್ಷೇಪವಿಲ್ಲ. ವಾಹನದಲ್ಲಿರುವವರು ಶವಮಂಚದ ಹಿಂದಿರುವುದು ಉತ್ತಮ ವೆಂದು ಹನಫೀಗಳ ಅಭಿಪ್ರಾಯವಾದರೆ ಇಮಾಮ್ ಶಾಫಿಈ(ರ) ಅವರ ಪ್ರಕಾರ ನಡೆಯುವವರಂತೆ ವಾಹನದಲ್ಲಿರುವವರೂ ಶವಮಂಚದ ಮುಂದಿರುವುದು ಉತ್ತಮ.

**10. ಶವಯಾತ್ರೆಯಲ್ಲಿ ಬೆಂಕಿ ಮತ್ತು ಶಬ್ದ ನಿಷಿದ್ಧ**

ಶವಯಾತ್ರೆಯ ಜತೆ ಬೆಂಕಿ ಕೊಂಡು ಹೋಗುವುದು ಹಾಗೂ ಶವಯಾತ್ರೆಯ ಜತೆಯಲ್ಲಿರುವವರು ನಡೆಯುವಾಗ ಶಬ್ದ ಮಾಡುವುದು (ಅದು ಕಲಿಮಃ, ದುಆ ಅಥವಾ ತಿಲಾವತ್ ಆದರೂ ಸರಿಯೇ) ಮಕ್ರೂಹ್ (ಅನಪೇಕ್ಷಿತ) ಆಗಿದೆ. ಈ ಬಗ್ಗೆ ಎಲ್ಲಾ ಇಮಾಮ್‌ಗಳ ಒಮ್ಮತವಿದೆ. **(ಅಲ್ ಫತ್ಹುರ್ರಬ್ಬಾನೀ ಭಾಗ - 8, ಪುಟ: 23)**

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಶವಯಾತ್ರೆಯ ಜತೆಗೆ ಬೆಂಕಿಯಾಗಲೀ ಶಬ್ದವಾಗಲೀ ಹೋಗಬಾರದು."

**(ವರದಿ: ಹ. ಅಬೂಹುರೈರಾ(ರ) - ಅಹ್ಮದ್, ಅಬೂದಾವೂದ್, ಬೈಹಕಿ)**

ಆರ್ಭಟಿಸಿ ರೋದಿಸಿಕೊಂಡು ಹೋಗುವ ಶವಯಾತ್ರೆಯ ಜತೆ ಹೋಗುವುದರಿಂದ ಪ್ರವಾದಿ(ಸ) ನಮ್ಮನ್ನು ತಡೆದಿರುವರು.

**(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ) - ಅಹ್ಮದ್, ಇಬ್ನುಮಾಜಃ)**

**11. ಶವಯಾತ್ರೆಯ ಜತೆ ಮಹಿಳೆಯರು ಹೋಗಬಾರದು**

ನಮ್ಮನ್ನು (ಮಹಿಳೆಯರನ್ನು) ಶವಯಾತ್ರೆಯ ಜತೆ ಹೋಗುವುದರಿಂದ ತಡೆಯ ಲಾಗಿದೆ. ಆದರೆ ಆ ಬಗ್ಗೆ ಬಲವಂತಪಡಿಸಲಿಲ್ಲ.

**(ವರದಿ: ಹ. ಉಮ್ಮು ಅತಿಯ್ಯ(ರ) - ಬುಖಾರಿ, ಮುಸ್ಲಿಮ್)**

ಹನಫೀ ಕ್ರಮದಂತೆ ಇದು 'ಮಕ್ರೂಹ್ ತಹ್ರೀಮಿ' (ನಿಷಿದ್ಧವಾಗುವಷ್ಟು ಆಕ್ಷೇಪಾರ್ಹ) ಆಗಿದೆ. ಇನ್ನು ಕೆಲವು ಇಮಾಮರ ಪ್ರಕಾರ ಇದು ಹರಾಮ್ (ನಿಷಿದ್ಧ) ಆಗಿದೆ.

•••

# ಜನಾಝಾ ನಮಾಝ್

**1. ವಿಧಿ**

ಮಯ್ಯಿತ್‌ನ ಸ್ನಾನ ಮತ್ತು ಕಫನ್‌ನಂತೆ ಜನಾಝಾ ನಮಾಝ್ ಕೂಡಾ ಫರ್ಝ್ ಕಿಫಾಯ ಆಗಿದೆ. ಪ್ರವಾದಿ(ಸ) ಅದನ್ನು ಆಜ್ಞಾಪಿಸಿರುವರು. ಆರಂಭದಿಂದ ಇಂದಿನ ತನಕ ಮುಸ್ಲಿಮ್ ಸಮುದಾಯ ಆ ಆದೇಶವನ್ನು ಪಾಲಿಸುತ್ತಾ ಬಂದಿದೆ.

ಸಾಲಗಾರನಾಗಿ ಮೃತನಾದ ಒಬ್ಬ ವ್ಯಕ್ತಿಯ ಮೃತದೇಹವನ್ನು ತರಲಾದಾಗ ಪ್ರವಾದಿ(ಸ) ಈ ರೀತಿ ವಿಚಾರಿಸುತ್ತಿದ್ದರು: ಅವನು ತನ್ನ ಸಾಲ ತೀರಿಸುವಷ್ಟು ಸೊತ್ತನ್ನು ಬಿಟ್ಟಗಲಿದ್ದಾನೆಯೇ? ಜನರು ಹೌದೆಂದರೆ ಪ್ರವಾದಿ(ಸ) ಆ ವ್ಯಕ್ತಿಯ ಜನಾಝಾ ನಮಾಝ್ ನಿರ್ವಹಿಸುತ್ತಿದ್ದರು. ಜನರು ಇಲ್ಲವೆಂದರೆ 'ನೀವು ಅವನ ಜನಾಝಾ ನಮಾಝ್ ನಿರ್ವಹಿಸಿ' ಎಂದು ಹೇಳುತ್ತಿದ್ದರು.

(ವರದಿ: ಹ. ಅಬೂಹುರೈರಾ(ರ) - ಬುಖಾರಿ, ಮುಸ್ಲಿಮ್)

ಈ ಬಗ್ಗೆ ಕರ್ಮಶಾಸ್ತ್ರ ವಿದ್ವಾಂಸರಲ್ಲಿ ಒಮ್ಮತವಿದೆ.

(ಫತ್ಹುಲ್ ಕದೀರ್, ಸಂಪುಟ - 1, ಪುಟ: 289)

## 2. ಮಹತ್ವ

ಜನಾಝಾ ನಮಾಝ್‌ನ ಮಹತ್ವ ಮತ್ತು ಪುಣ್ಯದ ಕುರಿತು ಅನೇಕ ಹದೀಸ್‌ಗಳಿವೆ. ಅವುಗಳ ಪೈಕಿ ಒಂದನ್ನು ಇಲ್ಲಿ ಕೊಡಲಾಗಿದೆ:

ಒಬ್ಬನು ಒಂದು ಮಯ್ಯಿತ್‌ನ ಜನಾಝಾ ನಮಾಝ್ ಮಾಡಿದರೆ ಅವನಿಗೆ ಒಂದು 'ಕೀರಾತ್'ನಷ್ಟು ಪುಣ್ಯ ಸಿಗುತ್ತದೆ. ಅದರ ಸಂಸ್ಕಾರದ ತನಕ ನಿಂತವನಿಗೆ ಎರಡು ಕೀರಾತ್‌ನಷ್ಟು ಪುಣ್ಯ ದೊರಕುತ್ತದೆ. 'ಕೀರಾತ್' ಎಂದರೇನೆಂದು ಸಹಾಬಿಗಳು ಕೇಳಿದಾಗ ಪ್ರವಾದಿ(ಸ) "ಅವುಗಳ ಪೈಕಿ ಪ್ರತಿಯೊಂದೂ ಉಹುದ್ ಬೆಟ್ಟಕ್ಕಿಂತ ದೊಡ್ಡದಾಗಿದೆ" ಎಂದರು.

(ವರದಿ: ಹ. ಅಬೂಹುರೈರಾ(ರ) - ನಸಾಈ, ಇಬ್ನುಮಾಜಃ, ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂದಾವೂದ್, ತಿರ್ಮಿದಿ ಇತ್ಯಾದಿ)

## 3. ಸ್ಥಳ

ಜನಾಝಾ ನಮಾಝ್ ಮೈದಾನದಲ್ಲೂ ನಿರ್ವಹಿಸಬಹುದು. ಮಸೀದಿಯು ಮಲಿನವಾಗುವ ಭೀತಿಯಿಲ್ಲದಿದ್ದರೆ ಅದನ್ನು ಮಸೀದಿಯಲ್ಲೂ ನಿರ್ವಹಿಸಬಹುದು.

ಹ. ಸಅದ್ ಬಿನ್ ಅಬೀ ವಕ್ಕಾಸ್(ರ) ನಿಧನ ಹೊಂದಿದಾಗ ಹ. ಆಯಿಶಾ(ರ) ಮತ್ತು ಪ್ರವಾದಿವರ್ಯರ(ಸ) ಇತರ ಪತ್ನಿಯರು ಅವರ ಮೃತದೇಹವನ್ನು ತಮ್ಮ ಹತ್ತಿರದ ಮಸೀದಿಯ ಮೂಲಕ ಸಾಗಿಸಬೇಕು ಎಂದು ಹೇಳಿ ಕಳುಹಿಸಿದರು. ಪ್ರವಾದಿ ಪತ್ನಿಯರು(ರ) ಅವರ ಜನಾಝಾ ನಮಾಝ್ ನಿರ್ವಹಿಸಿದರು. ಇತರ ಸಹಾಬಿಗಳು ಅವರ(ರ) ಈ ಕೃತ್ಯವನ್ನು ತಪ್ಪೆಂದು ಘೋಷಿಸಿದರು. ಹ. ಆಯಿಶಾರಿಗೆ(ರ) ಈ ವಿಷಯ ತಿಳಿದಾಗ, "ಜನರು ನಮ್ಮ ಕೃತ್ಯವನ್ನು ತಪ್ಪೆಂದು ಸಾರುವುದು ಎಷ್ಟೊಂದು ಸೋಜಿಗದ ವಿಷಯ. ಅಲ್ಲಾಹನಾಣೆ. ಪ್ರವಾದಿ(ಸ) ಅವರು ಬೈದಾಅ್(ರ) (ಓರ್ವ ಸಹಾಬಿ ಮಹಿಳೆ) ಅವರ ಜನಾಝಾ ನಮಾಝನ್ನು ಮಸೀದಿಯಲ್ಲೇ ನಿರ್ವಹಿಸಿದ್ದರು.

(ಮುಸ್ಲಿಮ್, ಅಹ್ಮದ್, ಬೈಹಕಿ, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಇಬ್ನ್ ಶುಅ್‌ಬಃ)

ಹ. ಅಬೂಬಕರ್(ರ) ಅವರ ಜನಾಝಾ ನಮಾಝನ್ನು ಮಸೀದಿಯಲ್ಲೇ ನಿರ್ವಹಿಸಲಾಗಿತ್ತು. (ವರದಿ: ಇಬ್ನ್ ಅಬೀ ಶೀಬಾ)

ಹ. ಉಮರ್(ರ) ಅವರ ಜನಾಝಾ ನಮಾಝನ್ನು ಮಸೀದಿಯಲ್ಲೇ ನಿರ್ವಹಿಸಲಾಯಿತು. [ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)]

ಇದುವೇ ಹೆಚ್ಚಿನ ವಿದ್ವಾಂಸರ ಮತ್ತು ಶಾಫಿಈ(ರ) ಅವರ ಅಭಿಮತ.

ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ ಮಸೀದಿಯಲ್ಲಿ ಜನಾಝಾ ನಮಾಝ್ ಮಾಡುವುದು ಮಕ್ರೂಹ್(ಅನಪೇಕ್ಷಿತ)ವಾಗಿದೆ.

## 4. ಸಮಯ

ಜನಾಝಾ ನಮಾಝ್‌ಗೆ ಯಾವುದೇ ನಿರ್ದಿಷ್ಟ ಸಮಯವಿಲ್ಲ. ಸಾಮಾನ್ಯವಾಗಿ ನಮಾಝ್ ಮಾಡಬಾರದೆಂದಿರುವ (ಮಕ್ರೂಹ್) ಮೂರು ವೇಳೆಗಳನ್ನು ಬಿಟ್ಟು ರಾತ್ರಿ ಹಗಲಿನ ಯಾವ ಹೊತ್ತಿನಲ್ಲೂ ಈ ಜನಾಝಾ ನಮಾಝ್ ನಿರ್ವಹಿಸಬಹುದಾಗಿದೆ.

ಪ್ರವಾದಿ(ಸ) ನಮ್ಮನ್ನು ಮೂರು ಸಮಯಗಳಲ್ಲಿ ನಮಾಝ್ ಮಾಡುವುದರಿಂದ ಮತ್ತು ಮಯ್ಯಿತನ್ನು ದಫನ ಮಾಡುವುದರಿಂದ ತಡೆದಿದ್ದರು. ಒಂದು, ಸೂರ್ಯ ಉದಿಸುತ್ತಿರುವ ಸಮಯ-ಹೊತ್ತೇರುವ ತನಕ. ಎರಡು, ಅದು ನಡುನೆತ್ತಿಗೇರಿದಾಗ ಮತ್ತು ಮೂರು, ಹೊತ್ತು ಮುಳುಗಲು ಆರಂಭವಾದಾಗ-ಅದು ಸಂಪೂರ್ಣ ಮುಳುಗುವ ತನಕ.

(ವರದಿ: ಹ. ಉಕ್ಬಾ ಬಿನ್ ಆಮಿರ್(ರ) - ಮುಸ್ಲಿಮ್, ಅಹ್ಮದ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜ಼)

ಇದುವೇ ಹೆಚ್ಚಿನ ವಿದ್ವಾಂಸರ ಮತ್ತು ಇಮಾಮ್ ಅಬೂಹನೀಫಾರ(ರ) ಅಭಿಮತ. ಇಮಾಮ್ ಶಾಫಿಈ(ರ) ಅವರ ಪ್ರಕಾರ ಮಸೀದಿಯಲ್ಲಿ ನಿಷಿದ್ಧ ವೇಳೆಯಲ್ಲಿ ಎಲ್ಲಾ ಫರ್ಝ್ ಮತ್ತು ಸುನ್ನತ್ ನಮಾಝ್‌ಗಳನ್ನು ನಿರ್ವಹಿಸಬಹುದಾದುದರಿಂದ ಮಯ್ಯಿತ್ ನಮಾಝ್ ಕೂಡಾ ಆ ವೇಳೆಗಳಲ್ಲಿ ನಿರ್ವಹಿಸಬಹುದು.

## 5. ನಿಬಂಧನೆಗಳು

ಇತರ ನಮಾಝ್‌ಗಳಂತೆ ಜನಾಝಾ ನಮಾಝ್‌ಗೆ ಕೂಡಾ ಕಿಬ್ಲಾಭಿಮುಖವಾಗಿರುವುದು, ಔರತ್ (ಸತ್ರ್) ಮರೆಸುವುದು ಎಲ್ಲಾ ಕರ್ಮಶಾಸ್ತ್ರ ವಿದ್ವಾಂಸರ ಪ್ರಕಾರ ಮೂಲ ನಿಬಂಧನೆಯಾಗಿದೆ. ಆದರೆ ವುಝೂವಿನ ಕುರಿತು ಇಮಾಮರುಗಳ ಮಧ್ಯೆ ಭಿನ್ನಾಭಿಪ್ರಾಯವಿದೆ. ಹೆಚ್ಚಿನ ವಿದ್ವಾಂಸರ ಪ್ರಕಾರ ಇದು ಕೂಡಾ ನಿಬಂಧನೆಯಾಗಿದೆ. ಇತರ ನಮಾಝ್‌ಗಳಂತೆ ಇದಕ್ಕೂ ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಮಾತ್ರ ತಯಮ್ಮುಮ್ ಮಾಡಬಹುದಾಗಿದೆ.

ಇಮಾಮ್ ಶಾಫಿಈ ಮತ್ತು ಹೆಚ್ಚಿನ ಮುಹದ್ದಿಸ್‌ಗಳ ಅಭಿಪ್ರಾಯ ಇದುವೇ ಆಗಿದೆ.

ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ ಇಮಾಮ್ ಜನಾಝಾ ನಮಾಝ್ ಆರಂಭ ಮಾಡಿರುವಾಗ ಒಬ್ಬನು ವುಝೂ ಮಾಡಲು ಹೊರಟಿದ್ದು, ನಮಾಝ್ ಸಿಗಲಾರದು ಎಂಬ ಭೀತಿ ಇದ್ದರೆ ತಯಮ್ಮುಮ್ ಮಾಡಬಹುದಾಗಿದೆ.

**(ಫತ್ಹುಲ್ ಬಾರಿ-ಹಿದಾಯತುಲ್ ಮುಜ್ತಹಿದ್, ಭಾಗ-1, ಪುಟ: 197)**

## 6. ಫರ್ಝ್‌ಗಳು

ಜನಾಝಾ ನಮಾಝ್‌ಗೆ ಈ ಕೆಳಗಿನ 'ಫರ್ಝ್' ಅಥವಾ ಕಡ್ಡಾಯ ವಿಧಿಗಳಿವೆ. ಅವುಗಳ ಪೈಕಿ ಒಂದು ಬಿಟ್ಟು ಹೋದರೂ ನಮಾಝ್ ಸಿಂಧುವಾಗುವುದಿಲ್ಲ.

**(1) ನಿಯ್ಯತ್ ಅಥವಾ ಸಂಕಲ್ಪ:** ಇದನ್ನು ಈ ಗ್ರಂಥದ ಭಾಗ-1ರಲ್ಲಿ ವಿವರಿಸಿದ್ದೇವೆ. (ನೋಡಿರಿ: ವುಝೂ ಮತ್ತು ನಮಾಝ್‌ನ ಫರ್ಝ್‌ಗಳು) ಎಲ್ಲ ಶರೀಅತ್ ಕಾರ್ಯಗಳಿಗೂ ಈ ಸಂಕಲ್ಪವು ಕಡ್ಡಾಯವಾಗಿದೆ.

**(2) ಕಿಯಾಮ್ (ನಿಲ್ಲುವುದು):** ಫರ್ಝ್ ನಮಾಝ್‌ಗಳಂತೆ ಜನಾಝಾ ನಮಾಝನ್ನೂ ನಿಂತುಕೊಂಡು ನಿರ್ವಹಿಸುವುದು ಕಡ್ಡಾಯವಾಗಿದೆ. ಅದನ್ನು ವಾಹನದ ಮೇಲೇರಿಕೊಂಡು ನಿರ್ವಹಿಸುವಂತಿಲ್ಲ. ಈ ಬಗ್ಗೆ ಯಾರಿಗೂ ಭಿನ್ನಾಭಿಪ್ರಾಯವಿಲ್ಲ.

**(ಅಲ್ ಮುಗ್ನಿ, ಭಾಗ - 3, ಪುಟ: 374)**

**(ವಿವರಣೆಗೆ ನೋಡಿರಿ, ಫಿಕ್ಹುಸ್ಸುನ್ನ, ಭಾಗ -1)**

**(3) ತಕ್ಬೀರ್:** ಜನಾಝಾ ನಮಾಝ್‌ನಲ್ಲಿ ತಕ್ಬೀರ್ (ಅಲ್ಲಾಹು ಅಕ್ಬರ್) ಹೇಳುವುದು ಕಡ್ಡಾಯವಾಗಿದೆ ಎಂಬುದು ಸರ್ವಸಮ್ಮತ ವಿಷಯ.

**(ವಿವರಣೆಗೆ ನೋಡಿರಿ, ಫಿಕ್ಹುಸ್ಸುನ್ನ, ಭಾಗ - 1)**

3(ಅ) ಪ್ರವಾದಿ(ಸ) ಜನಾಝಾ ನಮಾಝ್‌ನಲ್ಲಿ ನಾಲ್ಕು ಅಥವಾ ಐದು ತಕ್ಬೀರ್ ಹೇಳಿದ್ದರೆಂದು ಹದೀಸ್‌ಗಳಿಂದ ತಿಳಿದು ಬರುತ್ತದೆ.

ಸಹಾಬಿಗಳು ಮದೀನಾದಲ್ಲಿ (ಇಥಿಯೋಪಿಯಾದ ದೊರೆ) ನಜ್ಜಾಶೀ(ರ) ಅವರ ಮರಣದ ವಾರ್ತೆ ತಿಳಿಸಿದರು. ಸಹಾಬಿಗಳು ಪ್ರವಾದಿವರ್ಯರ(ಸ) ಹಿಂದೆ ಜನಾಝಾ ನಮಾಝ್ ಮಾಡಿದರು. ಪ್ರವಾದಿ(ಸ) ಆ ನಮಾಝ್‌ನಲ್ಲಿ ನಾಲ್ಕು ತಕ್ಬೀರ್ ಹೇಳಿದರು.

**(ವರದಿ: ಹ. ಅಬೂಹುರೈರಾ(ರ)-ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜ಼)**

ಹ. ಝೈದ್ ಬಿನ್ ಅರ್ಕಮ್(ರ) ನಮ್ಮ ಜನಾಝಾ ನಮಾಝ್‌ಗಳಲ್ಲಿ ನಾಲ್ಕು ತಕ್ಬೀರ್‌ಗಳನ್ನು ಹೇಳುತ್ತಿದ್ದರು. ಒಮ್ಮೆ ಅವರು ಐದು ತಕ್ಬೀರ್‌ಗಳನ್ನು ಹೇಳಿದರು. ಜನರು ವಿಚಾರಿಸಿದಾಗ ಅವರು ಹೇಳಿದರು, "ಪ್ರವಾದಿ(ಸ) ಐದು ತಕ್ಬೀರ್‌ಗಳನ್ನು ಹೇಳುತ್ತಿದ್ದರು" ಅಥವಾ "ಪ್ರವಾದಿ(ಸ) ಐದು ತಕ್ಬೀರ್‌ಗಳನ್ನು ಹೇಳಿದ್ದರು."

**[ವರದಿ: ಇಬ್ನ್ ಅಬೀ ಲೈಲಾ(ರ)]**

ಆದರೆ ಹೆಚ್ಚಿನೆಲ್ಲ ಇಮಾಮರು ಜನಾಝಾ ನಮಾಝ್‌ನಲ್ಲಿ ನಾಲ್ಕು ತಕ್ಬೀರ್ ಹೇಳಬೇಕು ಎಂಬ ಬಗ್ಗೆ ಒಮ್ಮತಾಭಿಪ್ರಾಯ ಹೊಂದಿದ್ದಾರೆ.

**(ವಿವರಣೆಗೆ ನೋಡಿರಿ: ಅಲ್ ಫತ್ಹುರ್ರಬ್ಬಾನೀ ಭಾಗ-7, ಪುಟ: 232-233, ನೈಲುಲ್ ಔತಾರ್ ಭಾಗ-4, ಪುಟ: 63)**

**(4) ಸೂರಃ ಫಾತಿಹಾ ಪಠಿಸುವುದು:** ಜನಾಝಾ ನಮಾಝ್‌ನಲ್ಲಿ ಪ್ರಥಮ ತಕ್ಬೀರ್‌ನ ನಂತರ ಸೂರಃ ಫಾತಿಹಾ ಪಠಿಸಬೇಕು.

ಇಮಾಮ್ ಶಾಫಿಈ(ರ) ಅವರ ಪ್ರಕಾರ ಇದು ಕಡ್ಡಾಯವಾಗಿದೆ. ಏಕೆಂದರೆ ಜನಾಝಾ ನಮಾಝ್ ಕೂಡಾ ಒಂದು ನಮಾಝ್ ಆಗಿದೆ. ಪ್ರವಾದಿ(ಸ) ನಮಾಝ್‌ನ ಕುರಿತು ಈ ರೀತಿ ಹೇಳಿರುವರು:

ಸೂರಃ ಫಾತಿಹಾ ಇಲ್ಲದ ಯಾವುದೇ ನಮಾಝ್ ಇಲ್ಲ.

ಆದರೆ ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ ಜನಾಝಾ ನಮಾಝ್‌ನಲ್ಲಿ ಫಾತಿಹಾ ಓದಲಿಕ್ಕಿಲ್ಲ. ಏಕೆಂದರೆ ಅದು ಮಯ್ಯಿತ್‌ಗಾಗಿ ಮಾಡುವ ಪ್ರಾರ್ಥನೆಯಾಗಿದೆಯೇ ಹೊರತು ಒಂದು ನಮಾಝ್ ಅಲ್ಲ.

**(5) ಮಯ್ಯಿತ್‌ಗಾಗಿ ಪ್ರಾರ್ಥನೆ:** ಜನಾಝಾ ನಮಾಝ್‌ನಲ್ಲಿ ಮಯ್ಯಿತ್‌ಗಾಗಿ ದುಆ ಮಾಡುವುದು ಹೆಚ್ಚಿನ ವಿದ್ವಾಂಸರ ಬಳಿ ಕಡ್ಡಾಯವಾಗಿದೆ. ಇಮಾಮ್ ಇಬ್ನ್ ಕಯ್ಯಿಮ್(ರ) ಹೀಗೆ ಹೇಳಿರುವರು:

ಜನಾಝಾ ನಮಾಝ್‌ನ ನೈಜ ಉದ್ದೇಶ ಮಯ್ಯಿತ್‌ಗಾಗಿ ಪ್ರಾರ್ಥಿಸುವುದಾಗಿದೆ. ಆದ್ದರಿಂದ ಪ್ರವಾದಿವರ್ಯರಿಂದ(ಸ) ಜನಾಝಾ ನಮಾಝ್‌ನಲ್ಲಿ 'ದುಆ'ದ ಬಗ್ಗೆ ಬಂದಿರುವಷ್ಟು ಹೆಚ್ಚು ವರದಿಗಳು ಸೂರಃ ಫಾತಿಹಾ ಅಥವಾ 'ಸಲಾತ್'(ದರೂದ್)ನ ಬಗ್ಗೆ ಬಂದಿಲ್ಲ. **(ಝಾದುಲ್ ಮಆದ್, ಭಾಗ-9, ಪುಟ: 292)**

5(ಅ) ಮಯ್ಯಿತ್‌ಗಾಗಿ ಪ್ರಾರ್ಥಿಸುವಾಗ ನಿಷ್ಠೆಯಿಂದ ಪ್ರಾರ್ಥಿಸಬೇಕು.

ಪ್ರವಾದಿ(ಸ) ಹೀಗೆ ಹೇಳಿರುವರು:

ನೀವು ಯಾವುದಾದರೂ ಮಯ್ಯಿತ್‌ಗಾಗಿ ಪ್ರಾರ್ಥಿಸುವಾಗ ನಿಷ್ಕಳಂಕ ಮನಸ್ಸಿನೊಂದಿಗೆ ಪ್ರಾರ್ಥಿಸಬೇಕು.

**(ವರದಿ: ಹ. ಅಬೂಹುರೈರಾ(ರ) - ಅಬೂದಾವೂದ್, ಇಬ್ನುಮಾಜಃ)**

5(ಆ) ಜನಾಝಾ ನಮಾಝ್‌ನಲ್ಲಿ ಪಠಿಸುವ ಅನೇಕ ದುಆಗಳು ಹದೀಸ್‌ಗಳಲ್ಲಿ ವರದಿಯಾಗಿವೆ. ಆ ಪೈಕಿ ಮೂರು ದುಆಗಳನ್ನು ಇಲ್ಲಿ ಕೊಡಲಾಗಿದೆ;

اَللّٰهُمَّ اغْفِرْ لِحَيِّنَا وَمَيِّتِنَا وَشَاهِدِنَا وَغَائِبِنَا وَصَغِيْرِنَا وَكَبِيْرِنَا ،

وَذَكَرِنَا۔ وَاُنْثَانَا اَللّٰهُمَّ مَنْ اَحْيَيْتَهُ مِنَّا فَاَحْيِهِ عَلَى الْاِسْلَامِ وَمَنْ تَوَفَّيْتَهُ مِنَّا فَتَوَفَّهُ عَلَى الْاِيْمَانِ۔

(i) "ಅಲ್ಲಾಹುಮ್ಮಗ್ಫಿರ್ ಲಿಹಯ್ಯಿನಾ ವ ಮಯ್ಯಿತಿನಾ ವಶಾಹಿದಿನಾ ವಗಾಇಬಿನಾ ವಸಗೀರಿನಾ ವಕಬೀರಿನಾ ವದಕರಿನಾ ವಉನ್‌ಸಾನಾ. ಅಲ್ಲಾಹುಮ್ಮ ಮನ್‌ಅಹ್‌ಯೈತಹೂ ಮಿನ್ನಾ ಫಅಹ್ಯಿಹೀ ಅಲಲ್ ಇಸ್ಲಾಮ್. ವಮನ್ ತವಫ್ಫೈತಹೂ ಮಿನ್ನಾ ಫತವಫ್ಫಹೂ ಅಲಲ್ ಈಮಾನ್."

(ಓ ಅಲ್ಲಾಹ್! ನಮ್ಮ ಪೈಕಿ ಜೀವಂತರು ಮತ್ತು ಮೃತರು, ನಮ್ಮ ಪೈಕಿ ಹಾಜರುಳ್ಳವರು ಮತ್ತು ಹಾಜರಿಲ್ಲದವರು, ನಮ್ಮ ಪೈಕಿ ಸಣ್ಣವರು ಮತ್ತು ದೊಡ್ಡವರು, ನಮ್ಮ ಪೈಕಿ ಪುರುಷರು ಮತ್ತು ಸ್ತ್ರೀಯರು ಎಲ್ಲರನ್ನೂ ಕ್ಷಮಿಸು. ಓ ಅಲ್ಲಾಹ್! ನಮ್ಮ ಪೈಕಿ ಯಾರನ್ನು ನೀನು ಜೀವಂತವಿಡುವುದಿದ್ದರೂ ಅವನನ್ನು ಇಸ್ಲಾಮ್‌ನಲ್ಲಿ ಜೀವಂತವಿರಿಸು ಮತ್ತು ಯಾರಿಗೆ ಮರಣ ನೀಡುತ್ತಿಯೋ ಅವನಿಗೆ ಈಮಾನ್‌ನೊಂದಿಗೆ ಮರಣ ನೀಡು.)

(ವರದಿ: ಹ. ಅಬೂಹುರೈರಾ(ರ) - ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಅಹ್ಮದ್, ಇಬ್ನ್ ಹಿಬ್ಬಾನ್, ಹಾಕಿಮ್)

اَللّٰهُمَّ اغْفِرْ لَهُ وَارْحَمْهُ وَعَافِهِ وَاعْفُ عَنْهُ، وَاَكْرِمْ نُزُلَهُ ، وَوَسِّعْ مَدْخَلَهُ وَاغْسِلْهُ بِالْمَآءِ وَالثَّلْجِ وَالْبَرَدِ ، وَنَقِّهِ مِنَ الْخَطَايَا كَمَا نَقَّيْتَ الثَّوْبَ الْاَبْيَضَ مِنَ الدَّنَسِ وَاَبْدِلْهُ دَارًا خَيْرًا مِّنْ دَارِهِ وَاَهْلاً خَيْرًا مِّنْ اَهْلِهِ وَزَوْجًا خَيْرًا مِّنْ زَوْجِهِ وَاَدْخِلْهُ الْجَنَّةَ وَنَجِّهِ مِنَ النَّارِ وَقِهِ عَذَابَ الْقَبْرِ

(ii) "ಅಲ್ಲಾಹುಮ್ಮಗ್ಫಿರ್‌ಲಹೂ ವರ್ಹಮ್‌ಹೂ ವಆಫಿಹೀ ವಅ್‌ಫುಅನ್‌ಹು ವ ಅಕ್ರಿಮ್ ನುಝುಲಹೂ ವ ವಸ್ಸಿಅ್ ಮದ್‌ಖಲಹೂ ವಗ್ಸಿಲ್‌ಹು ಬಿಲ್‌ಮಾಇ ವಸ್ಸಲ್‌ಜಿ ವಲ್‌ಬರದಿ, ವನಕ್ಕಿಹೀ ಮಿನಲ್ ಖತಾಯಾ ಕಮಾ ನಕ್ಕೈತಸ್ಸೌಬಲ್ ಅಬ್‌ಯದ ಮಿನದ್ದನಸಿ. ವಅಬ್‌ದಿಲ್‌ಹೂ ದಾರನ್ ಖೈರಂಮಿನ್ ದಾರಿಹೀ ವ ಅಹ್‌ಲನ್ ಖೈರಂ ಮಿನ್ ಅಹ್ಲಿಹೀ ವಝೌಜನ್ ಖೈರಂಮಿನ್ ಝೌಜಿಹೀ* ವಅದ್‌ಖಿಲ್‌ಹುಲ್ ಜನ್ನತ ವನಜ್ಜಿಹೀ ಮಿನನ್ನಾರಿ ವಕಿಹಿ ಅದಾಬಲ್ ಕಬ್ರ್."

---

* ಮಯ್ಯಿತ್ ಮಹಿಳೆಯದ್ದಾಗಿದ್ದರೆ 'ವಝೌಜನ್ ಖೈರಮ್ಮಿನ್ ಝೌಜಿಹಾ' ಎಂದು ಹೇಳಬೇಕು.

(ಓ ಅಲ್ಲಾಹ್! ಇವನಿಗೆ ಮೋಕ್ಷ ನೀಡು. ಇವನ ಮೇಲೆ ಕರುಣೆ ತೋರು. ಇವನನ್ನು ಕ್ಷೇಮವಾಗಿರಿಸು. ಇವನನ್ನು ಕ್ಷಮಿಸು. ಇವನಿಗೆ ಉತ್ತಮ ಆತಿಥ್ಯ ನೀಡು. ಇವನ ನಿವಾಸ (ಗೋರಿ)ವನ್ನು ವಿಶಾಲಗೊಳಿಸು. ಇವನನ್ನು ನೀರು, ಮಂಜು ಮತ್ತು ಇಬ್ಬನಿಯಿಂದ ಸ್ನಾನ ಮಾಡಿಸಿ ಪಾಪಗಳಿಂದ ಮುಕ್ತಗೊಳಿಸು- ನೀನು ಬಟ್ಟೆಯನ್ನು ಕೊಳೆಕಲ್ಮಷಗಳಿಂದ ನಿರ್ಮಲ ಗೊಳಿಸಿದಂತೆ. ಇವನಿಗೆ ಲೋಕದ ಮನೆಗಿಂತ ಉತ್ತಮ ಮನೆ, ಲೋಕದ ಬಂಧುಗಳಿ ಗಿಂತ ಉತ್ತಮ ಬಂಧುಗಳು, ಲೋಕದ ಜೀವನ ಸಂಗಾತಿಗಿಂತ ಉತ್ತಮ ಜೀವನ ಸಂಗಾತಿಯನ್ನು ದಯಪಾಲಿಸು. ಇವನನ್ನು ಸ್ವರ್ಗದಲ್ಲಿ ಪ್ರವೇಶಗೊಳಿಸು. ಇವನನ್ನು ನರಕಾಗ್ನಿಯಿಂದ ರಕ್ಷಿಸು. ಇವನಿಗೆ ಗೋರಿಯ ಶಿಕ್ಷೆಯಿಂದ ರಕ್ಷಣೆ ನೀಡು.)

(ವರದಿ: ಹ. ಔಫ್ ಬಿನ್ ಮಾಲಿಕ್(ರ)-
ಅಹ್ಮದ್, ಮುಸ್ಲಿಮ್, ನಸಾಈ, ಇಬ್ನುಮಾಜಃ)

ಹನಫಿಗಳು ಈ ದುಆವನ್ನು ಇತರೆಲ್ಲ ದುಆಗಳಿಗಿಂತ ಉತ್ತಮವೆನ್ನುತ್ತಾರೆ.

اَللّٰهُمَّ اِنَّـهُ عَبْدُكَ وَابْنُ اَمَتِكَ يَشْهَدُ اَنْ لَّا اِلٰـهَ اِلَّا اَنْـتَ
وَحْدَكَ لَا شَرِيْكَ لَكَ وَيَشْهَدُ اَنَّ مُحَمَّدًا عَبْدُكَ وَرَسُوْلُكَ
اَصْبَحَ فَقِيرًا اِلٰى رَحْمَتِكَ وَاَصْبَحْتَ غَنِيًّا عَنْ عَذَابِهٖ، تَخَلّٰى مِنَ
الدُّنْيَا وَاَهْلِيْهَا، اِنْ كَانَ زَكِيًّا فَزَكِّهٖ وَاِنْ كَانَ مُخْطِيًّا فَاغْفِرْلَهٗ
اَللّٰهُمَّ لَا تَحْرِمْنَا اَجْرَهٗ وَلَا تُضِلَّنَا بَعْدَهٗ.

**(iii)** "ಅಲ್ಲಾಹುಮ್ಮ ಇನ್ನಹೂ ಅಬ್ದುಕ ವಬ್ನು ಅಮತಿಕ ಯಶ್‌ಹದು ಅಲ್ಲಾ ಇಲಾಹ ಇಲ್ಲಾ ಅಂತ ವಹ್‌ದಕ ಲಾ ಶರೀಕಲಕ ವ ಯಶ್‌ಹದು ಅನ್ನ ಮುಹಮ್ಮದನ್ ಅಬ್ದುಕ ವ ರಸೂಲುಕ ಅಸ್‌ಬಹ ಫಕೀರನ್ ಇಲಾ ರಹ್ಮತಿಕ ವ ಅಸ್‌ಬಹತ್ ಗನಿಯ್ಯನ್ ಅನ್ ಅದಾಬಿಹೀ ತಖಲ್ಲಾ ಮಿನದ್ದುನ್ಯಾ ವ ಅಹ್‌ಲೀಹಾ ಇನ್ ಕಾನ ಝುಕಿಯ್ಯನ್ ಫಝುಕ್ಕಿಹೀ ವಇನ್ ಕಾನ ಮುಖ್ತಿಅನ್ ಫಗ್ಫಿರ್‌ಲಹೂ ಅಲ್ಲಾಹುಮ್ಮ ಲಾ ತಹ್ರಿಮ್ನಾ ಅಜ್ರಹೂ ವಲಾ ತುದಿಲ್ಲನಾ ಬಅ್‌ದಹೂ."

(ಓ ಅಲ್ಲಾಹ್! ಇವನು ನಿನ್ನ ದಾಸ, ನಿನ್ನ ದಾಸಿಯ ಪುತ್ರ. ನಿನ್ನ ಹೊರತು ಅನ್ಯ ಆರಾಧ್ಯನಿಲ್ಲವೆಂದೂ ನಿನಗಾರೂ ಪಾಲುದಾರರಿಲ್ಲವೆಂದೂ ಇವನು ಸಾಕ್ಷ್ಯ ವಹಿಸುತ್ತಾನೆ. ಮತ್ತು ಮುಹಮ್ಮದ್(ಸ) ನಿನ್ನ ದಾಸ ಮತ್ತು ಸಂದೇಶವಾಹಕರಾಗಿರುವರೆಂದೂ ಇವನು ಸಾಕ್ಷ್ಯ ವಹಿಸುತ್ತಾನೆ. ಇವನು ನಿನ್ನ ಕರುಣೆಯನ್ನು ಬೇಡುತ್ತಾನೆ. ಇವನನ್ನು ರಕ್ಷಿಸುವುದರಿಂದ

ನೀನು ನಿರಪೇಕ್ಷನಾಗಿರುವಿ. ಇವನು ಲೋಕ ಮತ್ತು ಲೋಕವಾಸಿಗಳಿಂದ ಬೇರ್ಪಟ್ಟಿದ್ದಾನೆ. ಇವನು ಪರಿಶುದ್ಧನಾಗಿದ್ದರೆ ನೀನು ಇವನನ್ನು ಪರಿಶುದ್ಧಗೊಳಿಸು (ಅರ್ಥಾತ್: ಅದರ ಪ್ರತಿಫಲ ನೀಡು) ಮತ್ತು ಇವನು ಪಾಪಿಯಾಗಿದ್ದರೆ ನೀನು ಇವನನ್ನು ಕ್ಷಮಿಸು. ಓ ಅಲ್ಲಾಹ್! ಇವನ ಪುಣ್ಯದಿಂದ ನಮ್ಮನ್ನು ವಂಚಿತಗೊಳಿಸದಿರು. ಇವನ ನಂತರ ನಮ್ಮನ್ನು ಪಥಭ್ರಷ್ಟಗೊಳಿಸದಿರು.) (ವರದಿ: ಹ. ಯಝೀದ್ ಬಿನ್ ರುಕಾನ(ರ) - ಹಾಕಿಮ್)

ಇಮಾಮ್ ಶಾಫಿಈ(ರ) ಅವರ ಪ್ರಕಾರ ಈ ದುಆ ಇತರೆಲ್ಲ ದುಆಗಳಿಗಿಂತ ಉತ್ತಮವಾಗಿದೆ.

ಮಯ್ಯಿತ್ ಅಪ್ರಾಪ್ತ ವಯಸ್ಕರದ್ದಾಗಿದ್ದರೆ ಈ ದುಆ ಪಠಿಸುವುದು ಅಪೇಕ್ಷಣೀಯವಾಗಿದೆ.

اَللّٰهُمَّ اجْعَلْهُ لَنَا سَلَفًا وَّفَرَطًا وَّاَجْرًا

"ಅಲ್ಲಾಹುಮ್ಮಜ್‌ಅಲ್‌ಹು ಲನಾ ಸಲಫಂವ ಫರತಂವ್ವ ಅಜ್ರನ್."

(ಓ ಅಲ್ಲಾಹ್! ಈ ಮಗುವನ್ನು ನಮ್ಮ ಮುಂಗಾಮಿಯಾಗಿ ಮಾಡು. ನಮ್ಮ ಪಾಲಿಗೆ ಇದನ್ನು ಪುಣ್ಯದಾಯಕ ಮಾಡು.) (ವರದಿ: ಹ. ಅಬೂಹುರೈರಾ(ರ) - ಬೈಹಕಿ)

ಹನಫೀ, ಶಾಫಿಈ ಮತ್ತು ಅಹ್ಲುಲ್ ಹದೀಸ್‌ಗಳ ಪ್ರಕಾರ 'ದುಆ'ವನ್ನು ಜನಾಝಾ ನಮಾಝ್‌ನಲ್ಲಿ ಮೂರನೆಯ ತಕ್ಬೀರ್‌ನ ನಂತರ ಪಠಿಸಬೇಕು.

**(6) ಸಲಾಮ್**

ಜನಾಝಾ ನಮಾಝ್‌ನ ಕೊನೆಯಲ್ಲಿ ಸಲಾಮ್ ಹೇಳುವುದು ಕಡ್ಡಾಯ.

ಇಮಾಮ್ ಶಾಫಿಈ(ರ) ಅವರ ಪ್ರಕಾರ ಇದು ಫರ್ಝ್ ಆಗಿದೆ. ಇಮಾಮ್ ಅಬೂ ಹನೀಫಾ(ರ) ಅವರ ಪ್ರಕಾರ ವಾಜಿಬ್. (ವಿವರಣೆಗೆ ನೋಡಿರಿ, ಫಿಕ್ಹುಸ್ಸುನ್ನ ಭಾಗ-1)

ಶಾಫಿಈ ಕರ್ಮಶಾಸ್ತ್ರದ ಪ್ರಕಾರ 'ಸಲಾತ್' (ದರೂದ್) ಕೂಡಾ ಜನಾಝಾ ನಮಾಝ್‌ನಲ್ಲಿ ಫರ್ಝ್ ಆಗಿದೆ. ಆದರೆ ಹನಫೀ ಮತ್ತು ಅಹ್ಲುಲ್ ಹದೀಸ್‌ಗಳ ಪ್ರಕಾರ ಇದು ಸುನ್ನತ್. ಆದ್ದರಿಂದ ಅದನ್ನು ನಾವು 'ಸುನ್ನತ್ ಮತ್ತು ಮುಸ್ತಹಿಬ್ಬಾತ್' (ಐಚ್ಛಿಕ ಮತ್ತು ಅಪೇಕ್ಷಿತ ವಿಧಿಗಳು) ಎಂಬ ಶೀರ್ಷಿಕೆಯಲ್ಲಿ ವಿವರಿಸಿದ್ದೇವೆ.

## 7. ಸುನ್ನತ್ ಮತ್ತು ಮುಸ್ತಹಿಬ್ಬಾತ್ (ಐಚ್ಛಿಕ ಮತ್ತು ಅಪೇಕ್ಷಿತ ವಿಧಿಗಳು)

ಜನಾಝಾ ನಮಾಝ್‌ನ ಸುನ್ನತ್‌ಗಳು ಹೀಗಿವೆ

**1) ಹಮ್ದ್:** ಪ್ರವಾದಿ(ಸ) ಒಮ್ಮೆ ಓರ್ವ ವ್ಯಕ್ತಿ ದುಆ ಮಾಡುವುದನ್ನು ಆಲಿಸಿದರು. ಆತ ದುಆ ಮಾಡುವ ಮುಂಚೆ ಅಲ್ಲಾಹನ ಹಮ್ದ್ (ಸ್ತುತಿ) ಆಗಲಿ. ಪ್ರವಾದಿ(ಸ) ಅವರ ಮೇಲೆ ಸಲಾತ್(ದರೂದ್) ಆಗಲಿ ಮಾಡಿರಲಿಲ್ಲ. ಪ್ರವಾದಿ(ಸ) ಹೇಳಿದರು: 'ಆತ ದುಡುಕಿದ.' (ವರದಿ: ಹ. ಫುಝಾಲ ಬಿನ್ ಉಬೈದ್(ರ)-ಅಬೂದಾವೂದ್, ತಿರ್ಮಿದಿ, ಇಬ್ನುಮಾಜಃ)

ಹನಫೀ ಕ್ರಮದಂತೆ ಪ್ರಥಮ ಮತ್ತು ದ್ವಿತೀಯ ತಕ್ಬೀರ್‌ನ ಮಧ್ಯೆ 'ಸುಬ್‌ಹಾನಕ ಲ್ಲಾಹುಮ್ಮ ವಬಿಹಮ್ದಿಕ...' ಪಠಿಸಬೇಕು. ಶಾಫಿಈ ಕ್ರಮದಂತೆ ಪ್ರಥಮ ತಕ್ಬೀರ್‌ನ ನಂತರ ಸೂರಃ ಫಾತಿಹಾವನ್ನು 'ಅಊದುಬಿಲ್ಲಾಹಿ ಮಿನಶ್ಶೈತಾನಿರ್‍ರಜೀಮ್', 'ಬಿಸ್ಮಿಲ್ಲಾ ಹಿರ್‍ರಹ್ಮಾನಿರ್‍ರಹೀಮ್' ಎಂಬ ವಚನಗಳೊಂದಿಗೆ ಆರಂಭಿಸಬೇಕು. ಅಹ್ಲುಲ್ ಹದೀಸ್‌ಗಳ ಪ್ರಕಾರ ಪ್ರಥಮ ತಕ್ಬೀರ್‌ನ ನಂತರ ಫಾತಿಹಾ ಆರಂಭಿಸುವುದಕ್ಕೆ ಮುಂಚೆ 'ಸುಬ್‌ಹಾನಕ ಲ್ಲಾಹುಮ್ಮ...' ಅಥವಾ 'ಇನ್ನೀ ವಜ್ಜಹ್ತು ವಜ್‌ಹಿಯ...' ಅಥವಾ 'ಅಲ್ಲಾಹುಮ್ಮ ಬಾಇದ್ ಬೈನೀ...' ಎಂದು ಪಠಿಸಬೇಕು.

2) ಸಲಾತ್: ಸಾಮಾನ್ಯ ನಮಾಝ್‌ನಂತೆ ಜನಾಝಾ ನಮಾಝ್‌ನಲ್ಲಿಯೂ ಇಮಾಮ್ ಶಾಫಿಈ(ರ) ಅವರ ಪ್ರಕಾರ ಸಲಾತ್ ಫರ್ಝ್ (ಕಡ್ಡಾಯ) ಆಗಿದೆ. ಹನಫೀಗಳ ಪ್ರಕಾರ ಅದು ಸುನ್ನತ್ ಆಗಿದೆ. (ವಿವರಣೆಗೆ ನೋಡಿರಿ, ಫಿಕ್ಹುಸ್ಸುನ್ನ ಭಾಗ-1)

ಹನಫೀ, ಶಾಫಿಈ(ರ) ಮತ್ತು ಅಹ್ಲುಲ್ ಹದೀಸ್‌ಗಳ ಪ್ರಕಾರ 'ಸಲಾತ್' ದ್ವಿತೀಯ ತಕ್ಬೀರ್‌ನ ನಂತರ ಪಠಿಸಬೇಕು.

(3) ರಫಉಲ್‌ಯದೈನ್ (ಎರಡು ಕೈಗಳನ್ನೆತ್ತುವುದು)

ಪ್ರವಾದಿ(ಸ) ಒಂದು ಜನಾಝಾ ನಮಾಝ್‌ನಲ್ಲಿ ತಕ್ಬೀರ್ ಹೇಳುತ್ತಾ ತಮ್ಮ ಕೈಗಳನ್ನೆತ್ತಿದ್ದರು ಮತ್ತು ತಮ್ಮ ಬಲಕೈಯನ್ನು ಎಡಕೈಯ ಮೇಲಿಟ್ಟರು.

(ವರದಿ: ಹ. ಅಬೂಹುರೈರಾ(ರ) - ತಿರ್ಮಿದಿ)

ಇಮಾಮ್ ಶಾಫಿಈ(ರ) ಅವರ ಪ್ರಕಾರ, ಪ್ರತಿಯೊಂದು ತಕ್ಬೀರ್‌ನ ವೇಳೆ ಕೈಗಳ ನ್ನೆತ್ತುವುದು ಸುನ್ನತ್ ಆಗಿದೆ. ಆದರೆ ಇಮಾಮ್ ಅಬೂಹನೀಫಾ(ರ) ಮತ್ತು ಅಹ್ಲುಲ್ ಹದೀಸ್‌ಗಳ ಪ್ರಕಾರ ಪ್ರಥಮ ತಕ್ಬೀರ್‌ನ ನಂತರದ ತಕ್ಬೀರ್‌ಗಳಲ್ಲಿ ಕೈಗಳನ್ನೆತ್ತುವುದು ಸುನ್ನತ್ ಅಲ್ಲ.

ಇಮಾಮ್ ಶಾಫಿಈ(ರ) ಮತ್ತು ಅಹ್ಲುಲ್ ಹದೀಸ್‌ಗಳು ನಾಲ್ಕನೆಯ ತಕ್ಬೀರ್‌ನ ನಂತರ ಮಯ್ಯಿತ್‌ಗಾಗಿ ಪ್ರಾರ್ಥಿಸುವುದು ಮುಸ್ತಹಬ್ (ಅಪೇಕ್ಷಿತ) ಎನ್ನುತ್ತಾರೆ.

(ನೈಲುಲ್ ಔತಾರ್ ಭಾಗ - 4, ಪುಟ: 70)

## 8. ಜನಾಝಾ ನಮಾಝ್‌ನ ಕ್ರಮ

ಹನಫೀ ಕ್ರಮದಂತೆ ಕಿಬ್ಲಾಭಿಮುಖವಾಗಿ ನಿಂತು 'ಅಲ್ಲಾಹು ಅಕ್ಬರ್' ಎನ್ನುತ್ತಾ ಕಿವಿಗಳ ತನಕ ಕೈಗಳನ್ನೆತ್ತಿ ನಾಭಿಯ ಕೆಳಗೆ ಕಟ್ಟುವುದು. ನಂತರ ಹಮ್ದ್ (ಸನಾ) ಪಠಿಸುವುದು. ಆ ಬಳಿಕ ದ್ವಿತೀಯ ತಕ್ಬೀರ್ ಹೇಳಿ ಪ್ರವಾದಿ(ಸ) ಅವರ ಮೇಲೆ ಸಲಾತ್ (ದರೂದ್) ಪಠಿಸುವುದು. ಅನಂತರ ಮೂರನೆಯ ತಕ್ಬೀರ್ ಹೇಳಿ ಮಯ್ಯಿತ್‌ಗಾಗಿ 'ದುಆ' ಮಾಡುವುದು. ತರುವಾಯ ನಾಲ್ಕನೆಯ ತಕ್ಬೀರ್ ಹೇಳಿ ಬಲ ಮತ್ತು ಎಡಭಾಗಗಳಿಗೆ

ಮುಖ ತಿರುಗಿಸಿ ಸಲಾಮ್ ಹೇಳುವುದು. ಇದರಲ್ಲಿ ಎರಡನೇ, ಮೂರನೇ ಮತ್ತು ನಾಲ್ಕನೆಯ ತಕ್ಬೀರ್‌ನ ವೇಳೆ ಕೈಗಳನ್ನೆತ್ತಲಿಕ್ಕಿಲ್ಲ.

ಶಾಫಿಈ ಕ್ರಮದಂತೆ ಕಿಬ್ಲಾಭಿಮುಖವಾಗಿ ನಿಂತು 'ಅಲ್ಲಾಹು ಅಕ್ಬರ್' ಎನ್ನುತ್ತಾ ಕಿವಿಗಳ ತನಕ ಕೈಗಳನ್ನೆತ್ತಿ ಎದೆಯ ಮೇಲೆ ಕಟ್ಟುವುದು. ನಂತರ 'ಅಊದು' ಮತ್ತು 'ಬಿಸ್ಮಿ' ಹೇಳಿ ಸೂರಃ ಫಾತಿಹಾ ಪಠಿಸುವುದು ಮತ್ತು ಕಿವಿಗಳ ತನಕ ಕೈಯೆತ್ತಿ ದ್ವಿತೀಯ ತಕ್ಬೀರ್ ಹೇಳಿ ಸಲಾತ್ ಪಠಿಸುವುದು. ಆ ಬಳಿಕ ಕಿವಿಗಳ ತನಕ ಕೈ ಎತ್ತಿ ಮೂರನೆಯ ತಕ್ಬೀರ್ ಹೇಳಿ ಮಯ್ಯಿತ್‌ಗಾಗಿ ಪ್ರಾರ್ಥಿಸುವುದು. ಅನಂತರ ಕಿವಿಗಳ ತನಕ ಕೈಎತ್ತಿ ನಾಲ್ಕನೆಯ ತಕ್ಬೀರ್ ಹೇಳಿ ಮಯ್ಯಿತ್‌ಗಾಗಿ ಮತ್ತು ಸಾಮಾನ್ಯ ಮುಸ್ಲಿಮರಿಗಾಗಿ ಪ್ರಾರ್ಥಿಸಿ ಎರಡೂ ಕಡೆ ಮುಖ ತಿರುಗಿಸಿ ಸಲಾಮ್ ಹೇಳುವುದು.

ಅಹ್ಲುಲ್ ಹದೀಸ್‌ಗಳ ಪ್ರಕಾರವೂ ಮೇಲಿನ ಕ್ರಮವೇ ಸರಿಯಾದುದು. ಆದರೆ ಪ್ರಥಮ ತಕ್ಬೀರ್‌ನಲ್ಲಿ ಮಾತ್ರ ಕೈ ಎತ್ತಬೇಕು. ದ್ವಿತೀಯ, ತೃತೀಯ ಮತ್ತು ಚತುರ್ಥ ತಕ್ಬೀರ್‌ಗಳ ವೇಳೆ ಕೈ ಎತ್ತಿದರೂ ಎತ್ತದಿದ್ದರೂ ಆಗುತ್ತದೆ.

### 9. ಜನಾಝಾ ನಮಾಝ್ ಸಿರ್ರಿ(ಮೌನ)ಯಾಗಿ ಪಠಿಸುವುದು

ಹನಫೀ ಕ್ರಮದಂತೆ ಜನಾಝಾ ನಮಾಝನ್ನು ಸಿರ್ರಿಯಾಗಿಯೇ(ಮೌನವಾಗಿ) ನಿರ್ವಹಿಸಬೇಕು.

ಕೆಲವು ಶಾಫಿಈ ವಿದ್ವಾಂಸರ ಪ್ರಕಾರ ಜನಾಝಾ ನಮಾಝ್ ರಾತ್ರಿಯ ವೇಳೆ ಜಹ್ರೀ (ಉಚ್ಚ ಸ್ವರದಲ್ಲಿ) ಮತ್ತು ದಿನದ ವೇಳೆ ಸಿರ್ರೀ (ರಹಸ್ಯ) ಆಗಿ ನಿರ್ವಹಿಸುವುದು ಉತ್ತಮ.

(ಅಲ್ ಫತ್ಹುರ್ರಬ್ಬಾನೀ)

ಅಹ್ಲುಲ್ ಹದೀಸ್ ವಿದ್ವಾಂಸರ ಪ್ರಕಾರ ಜಹ್ರೀ ಮತ್ತು ಸಿರ್ರಿ ಎರಡೂ ಕ್ರಮಗಳು ಸಾಮಾನ್ಯವಾಗಿವೆ.

### 10. ಇಮಾಮ್ ಹೇಗೆ ನಿಲ್ಲಬೇಕು?

ಮಯ್ಯಿತ್ ಪುರುಷನದ್ದಾಗಿದ್ದರೆ ಇಮಾಮ್ ಅದರ ತಲೆಯ ಮುಂದೆ ಮತ್ತು ಸ್ತ್ರೀಯದ್ದಾಗಿದ್ದರೆ ಅದರ ಮಧ್ಯೆ ನಿಲ್ಲುವುದು ಸುನ್ನತ್ ಆಗಿದೆ.

ಉಮ್ಮು ಕಅಬ್(ರ) ಬಾಣಂತಿಯಾಗಿರುವಾಗಲೇ ನಿಧನ ಹೊಂದಿದರು. ಪ್ರವಾದಿ(ಸ) ಅವರ ಜನಾಝಾ ನಮಾಝ್ ನಿರ್ವಹಿಸಿದರು. ಅವರು(ಸ) ಮಯ್ಯಿತ್‌ನ ಮಧ್ಯೆ ನಿಂತಿದ್ದರು.

(ವರದಿ: ಹ. ಸಮ್ರಾ ಬಿನ್ ಜುಂದುಬ್(ರ)- ಅಹ್ಮದ್, ಬುಖಾರಿ, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಬೈಹಕಿ)

ಹ. ಅನಸ್(ರ) ಒಬ್ಬ ಪುರುಷನ ಜನಾಝಾ ನಮಾಝ್ ಮಾಡಿಸಿದರು. ಅವರು ಮಯ್ಯಿತ್‌ನ ತಲೆಯ ಬಳಿ ನಿಂತಿದ್ದರು. ಜನಾಝಾವನ್ನು ಎತ್ತಿಯಾದ ಬಳಿಕ ಓರ್ವ

ಸ್ತ್ರೀಯ ಮಯ್ಯಿತ್ ತರಲಾಯಿತು. ಅದರ ಜನಾಝಾ ನಮಾಝನ್ನು ಕೂಡಾ ಹ. ಅನಸ್(ರ) ಅವರೇ ನಿರ್ವಹಿಸಿದರು. ಅವರು ಮಯ್ಯಿತ್‌ನ ಸೊಂಟದ ಬಳಿ ನಿಂತರು. ಇನ್ನೊಂದು ವರದಿಯಲ್ಲಿ 'ಅದರ ಮಧ್ಯೆ ನಿಂತರು' ಎಂಬ ಪದಗಳಿವೆ. ನಮಾಝ್ ಆದ ಬಳಿಕ ಅಲಾ ಬಿನ್ ಝಿಯಾದ್(ರ) ಕೇಳಿದರು. 'ಹಮ್‌ಝಾರ ತಂದೆಯವರೇ [ಹ. ಅನಸ್(ರ)!] ಪ್ರವಾದಿ(ಸ) ಪುರುಷರ ಮತ್ತು ಸ್ತ್ರೀಯರ ಜನಾಝಾದಲ್ಲಿ ನೀವು ನಿಂತ ಹಾಗೆಯೇ ನಿಲ್ಲುತ್ತಿದ್ದರೇ? ಅವರು ಹೌದೆಂದರು. (ತಿರ್ಮಿದಿ, ಅಹ್ಮದ್, ಇಬ್ನು ಅಬೀಶೀಬಾ, ತಹಾವೀ)

ಶಾಫಿಈ ಕ್ರಮವು ಇದುವೇ ಆಗಿದೆ. ಒಂದು ವರದಿಯ ಪ್ರಕಾರ ಇಮಾಮ್ ಅಬೂಹನೀಫಾ(ರ) ಅವರ ಅಭಿಪ್ರಾಯವೂ ಇದುವೇ ಆಗಿದೆ. ಸಾಮಾನ್ಯ ಎಲ್ಲ ಮುಹದ್ದಿಸ್‌ಗಳ ಅಭಿಮತವೂ ಇದುವೇ ಆಗಿದೆ. ಆದರೆ ಪ್ರಖ್ಯಾತವಾಗಿರುವ ಹನಫೀ ಕ್ರಮದಂತೆ ಮಯ್ಯಿತ್ ಸ್ತ್ರೀಯದ್ದಾಗಿರಲಿ ಪುರುಷನದ್ದಾಗಿರಲಿ ಇಮಾಮ್ ಅದರ ಮಧ್ಯೆ (ಅಂದರೆ ಎದೆಯ ಬಳಿ) ನಿಲ್ಲಬೇಕು. ಈ ಭಿನ್ನಾಭಿಪ್ರಾಯವು ಯಾವುದು ಉತ್ತಮ ಎಂಬ ವಿಷಯದಲ್ಲಿ ಮಾತ್ರ. ಇಮಾಮ್ ಜನಾಝಾ ನಮಾಝ್‌ನ ವೇಳೆ ಎಲ್ಲಿ ನಿಂತರೂ ನಮಾಝ್ ಸಿಂಧುವಾಗುತ್ತದೆ ಎಂಬುದು ಎಲ್ಲರ ಒಮ್ಮತಾಭಿಪ್ರಾಯವಾಗಿದೆ.

## 11. ನಮಾಝಿಗಳು ಹೆಚ್ಚಿದಷ್ಟು ಉತ್ತಮ

ಜನಾಝಾ ನಮಾಝ್‌ನಲ್ಲಿ ಜನ ಹೆಚ್ಚಿದಷ್ಟು ಉತ್ತಮವೆಂದು ಪ್ರವಾದಿ ವಚನ ಗಳಿಂದ ತಿಳಿದು ಬರುತ್ತದೆ:

"ಒಬ್ಬ ಮುಸ್ಲಿಮನು ತೀರಿ ಹೋಗಿದ್ದು ಅವನಿಗಾಗಿ ಮುಸ್ಲಿಮರ ನೂರರಷ್ಟು ಮಂದಿಯಿರುವ ದೊಡ್ಡ ಸಮೂಹವು ನಮಾಝ್ ಮಾಡಿದರೆ ಮತ್ತು ಅವನ ಪರವಾಗಿ ಶಿಫಾರಸು ಮಾಡಿದರೆ ಅವರ ಶಿಫಾರಸು ಸ್ವೀಕರಿಸಲ್ಪಡುವುದು."

(ವರದಿ: ಹ. ಆಯಿಶಾ(ರ) - ಮುಸ್ಲಿಮ್, ಅಹ್ಮದ್, ನಸಾಈ, ತಿರ್ಮಿದಿ)

ಇನ್ನು ಕೆಲವು ವರದಿಗಳಲ್ಲಿ ಈ ಸಂಖ್ಯೆಯು 40 ಮಂದಿ ಮತ್ತು ಮೂರು ಸಫ್(ಪಂಕ್ತಿ)ಗಳು ಎಂದಿದೆ. ಅನೇಕ ಸಹಾಬಿಗಳ ಪ್ರಶ್ನೆಗಳಿಗೆ ಉತ್ತರವಾಗಿ ಪ್ರವಾದಿ(ಸ) ಬೇರೆ ಬೇರೆ ಸಂಖ್ಯೆಗಳನ್ನು ಹೇಳಿದ್ದರು. ಇದರ ಉದ್ದೇಶವು ಹೆಚ್ಚೆಚ್ಚು ಸಂಖ್ಯೆಯಲ್ಲಿ ಜನರು ಸೇರುವಂತೆ ಪ್ರೇರೇಪಿಸುವುದಾಗಿತ್ತು.

## 12. ಮೂರು ಪಂಕ್ತಿಗಳನ್ನು ಮಾಡುವುದು

ಜನಾಝಾ ನಮಾಝ್‌ನಲ್ಲಿ ಮುಕ್ತದೀಗಳು ಮೂರು ಪಂಕ್ತಿಗಳನ್ನು ಮಾಡುವುದು ಉತ್ತಮ.

ಪ್ರವಾದಿ(ಸ) ಈ ರೀತಿ ಹೇಳಿರುವರು:

ಯಾವ ಮಯ್ಯಿತ್‌ಗಾಗಿ ಮೂರು ಪಂಕ್ತಿಗಳಲ್ಲಿ ನಮಾಝ್ ಮಾಡಲಾಗುತ್ತದೋ ಅಲ್ಲಾಹನು ಅದರ ಮೋಕ್ಷವನ್ನು ಕಡ್ಡಾಯಗೊಳಿಸಿದನು.

(ವರದಿ: ಹ. ಮಾಲಿಕ್ ಬಿನ್ ಹೇರಾ(ರ)-ಅಹ್ಮದ್, ಅಬೂದಾವೂದ್, ಇಬ್ನುಮಾಜಃ, ತಿರ್ಮಿದಿ)

ಈ ಬಗ್ಗೆ ಹನಫೀ, ಶಾಫಿಈಗಳಲ್ಲಿ ಭಿನ್ನಾಭಿಪ್ರಾಯವಿಲ್ಲ.

## 13. ಒಂದಕ್ಕಿಂತ ಹೆಚ್ಚು ಮಯ್ಯಿತ್‌ಗಳಿಗೆ ಒಂದೇ ನಮಾಝ್ ಮಾಡುವುದು

ಅನೇಕ ಜನಾಝಾ ಏಕಕಾಲದಲ್ಲಿ ಬಂದರೆ ಪ್ರತಿಯೊಂದಕ್ಕೂ ಬೇರೆ ಬೇರೆ ನಮಾಝ್ ಮಾಡುವ ಅಗತ್ಯವಿಲ್ಲ. ಎಲ್ಲದಕ್ಕೂ ಒಂದೇ ನಮಾಝ್ ಮಾಡಿದರೆ ಸಾಕಾಗುವುದು. ಪುರುಷರು ಮತ್ತು ಸ್ತ್ರೀಯರ ಮಯ್ಯಿತ್‌ಗಳು ಜತೆಗಿದ್ದರೆ ಪುರುಷರ ಮಯ್ಯಿತ್‌ಗಳನ್ನು ಇಮಾಮ್‌ಗೆ ಹತ್ತಿರ ಇರಿಸಬೇಕು. ಸ್ತ್ರೀಯರ ಮಯ್ಯಿತ್‌ಗಳನ್ನು ಅವುಗಳ ಮುಂದೆ ಕಿಬ್ಲಾದ ಕಡೆ ಇಡಬೇಕು. ಬಾಲಕರ ಮತ್ತು ಸ್ತ್ರೀಯರ ಮಯ್ಯಿತ್‌ಗಳು ಜತೆಗೆ ಬಂದರೆ ಬಾಲಕರ ಮಯ್ಯಿತ್‌ಗಳನ್ನು ಇಮಾಮರ ಸಮೀಪ ಇಟ್ಟು ಸ್ತ್ರೀಯರ ಮಯ್ಯಿತ್‌ಗಳನ್ನು ಅವುಗಳ ಮುಂದೆ ಕಿಬ್ಲಾದ ಕಡೆ ಇಡಬೇಕು. ಸ್ತ್ರೀಯರು, ಪುರುಷರು ಮತ್ತು ಬಾಲಕರ ಮಯ್ಯಿತ್‌ಗಳು ಜತೆಗೆ ಬಂದರೆ ಪುರುಷರ ಜನಾಝಾಗಳನ್ನು ಇಮಾಮರ ಹತ್ತಿರ ಇಡಬೇಕು. ಬಾಲಕರ ಜನಾಝಾ ಅವುಗಳ ಮುಂದೆ ಮತ್ತು ಸ್ತ್ರೀಯರ ಜನಾಝಾವನ್ನು ಅವುಗಳ ಮುಂದೆ ಕಿಬ್ಲಾದ ಕಡೆ ಇಡಬೇಕು.

ಹ. ಉಸ್ಮಾನ್(ರ), ಹ. ಇಬ್ನು ಉಮರ್(ರ) ಮತ್ತು ಹ. ಅಬೂಹುರೈರಾ(ರ) ಮದೀನಾದಲ್ಲಿ ಸ್ತ್ರೀ ಪುರುಷರ ಜನಾಝಾ ನಮಾಝನ್ನು (ಒಟ್ಟಾಗಿ) ನಿರ್ವಹಿಸುತ್ತಿದ್ದರು. ಪುರುಷರ ಮಯ್ಯಿತನ್ನು ಇಮಾಮರ ಬಳಿ ಇಟ್ಟು ಸ್ತ್ರೀಯ ಮಯ್ಯಿತನ್ನು ಕಿಬ್ಲಾದ ಕಡೆಗೆ ಇಡಲಾಗುತ್ತಿತ್ತು. (ಮುವತ್ತಾ ಇಮಾಮ್ ಮಾಲಿಕ್)

ಒಬ್ಬ ಬಾಲಕ ಮತ್ತು ಸ್ತ್ರೀಯ ಜನಾಝಾ ನಮಾಝ್ ಬಂತು. ಬಾಲಕನನ್ನು ಜನರ ಬಳಿ ಇಡಲಾಯಿತು. ಸ್ತ್ರೀಯನ್ನು ಬಾಲಕನ ಹಿಂದೆ (ಕಿಬ್ಲಾದ ಕಡೆ) ಇಡಲಾಯಿತು. ಇಬ್ಬರಿಗೂ ಒಂದೇ ಜನಾಝಾ ನಮಾಝ್ ಮಾಡಲಾಯಿತು. ಜನರಲ್ಲಿ ಅಬೂಸಈದ್ ಖುದ್ರೀ(ರ), ಇಬ್ನು ಅಬ್ಬಾಸ್(ರ) ಮತ್ತು ಅಬೂಕತಾದಾ(ರ) ಇದ್ದರು. ನಾನು ಅವರಲ್ಲಿ ವಿಚಾರಿಸಿದಾಗ ಅವರು ಇದು ಸುನ್ನತ್ ಆಗಿದೆ ಎಂದರು.

(ವರದಿ: ಅಮ್ಮಾರ್ ಮೌಲಾ ಹಾರಿಸ್(ರ) - ಅಬೂದಾವೂದ್, ನಸಾಈ)

ಈ ಬಗ್ಗೆ ಸಮುದಾಯದ ಇಮಾಮರು ಮತ್ತು ಮುಹದ್ದಿಸ್‌ಗಳಲ್ಲಿ ಒಮ್ಮತವಿದೆ.

## 14. ತಡವಾಗಿ ಬಂದು ಜನಾಝಾ ನಮಾಝ್‌ನಲ್ಲಿ ಸೇರುವುದು

ಜನಾಝಾ ನಮಾಝ್ ಆರಂಭವಾದ ಬಳಿಕ ಯಾರಾದರೂ ಬಂದರೆ ಆತ ತಕ್ಬೀರ್ ಹೇಳಿ ನಮಾಝ್‌ನಲ್ಲಿ ಸೇರಿಕೊಳ್ಳಬೇಕು. ಎಷ್ಟು ತಕ್ಬೀರ್‌ಗಳು ಆತನಿಗೆ ಇಮಾಮ್‌ರ ಜತೆ

ದೊರೆಯುತ್ತದೋ ಅದನ್ನು ನಿರ್ವಹಿಸಬೇಕು. ಉಳಿದ ತಕ್ಬೀರ್‌ಗಳನ್ನು ಇಮಾಮ್ ಸಲಾಮ್ ಹೇಳಿಯಾದ ಬಳಿಕ ಪೂರ್ಣಗೊಳಿಸಬೇಕು. ಪ್ರವಾದಿ(ಸ) ಹೀಗೆ ಹೇಳಿರುವರು:

"ಎಷ್ಟು ಅಂಶ ಬಿಟ್ಟು ಹೋಗಿದೆಯೋ ಅದನ್ನು ಪೂರ್ಣಗೊಳಿಸಿರಿ." ಇನ್ನೊಂದು ವರದಿಯಲ್ಲಿ "ಎಷ್ಟು ಅಂಶ ಬಿಟ್ಟು ಹೋಗಿದೆಯೋ ಅದನ್ನು ಕಝಾ (ಸಂದಾಯ) ಮಾಡಿರಿ" ಎನ್ನಲಾಗಿದೆ.

ಈ ಬಗ್ಗೆ ಎಲ್ಲ ಇಮಾಮರ ಒಮ್ಮತವಿದೆ.

ಇಮಾಮ್ ಶಾಫಿಈ(ರ) ಮತ್ತು ಎಲ್ಲ ಮುಹದ್ದಿಸ್‌ಗಳ ಪ್ರಕಾರ ಅವನಿಗೆ ಇಮಾಮರ ಜತೆ ಸಿಕ್ಕಿದ ಭಾಗವೇ ಅವನ ಜನಾಝಾ ನಮಾಝ್‌ನ ಆರಂಭದ ಭಾಗವಾಗಿರುವುದು. ಆದ್ದರಿಂದ ಆತ ತನ್ನ ನಮಾಝನ್ನು ಸೂರಃ ಫಾತಿಹಾದಿಂದ ಆರಂಭಿಸಬೇಕು. ಇಮಾಮ್ ಅಬೂಹನೀಫಾ ಮತ್ತಿತರ ಇಮಾಮ್‌ಗಳ ಪ್ರಕಾರ ಅವನು ಇಮಾಮ್ ಸಲಾಮ್ ಹೇಳಿದ ನಂತರ ಒಬ್ಬಂಟಿಯಾಗಿ ನಿರ್ವಹಿಸುವ ಭಾಗವು ಅವನ ಜನಾಝಾ ನಮಾಝ್‌ನ ಆರಂಭದ ಭಾಗವಾಗಿರುವುದು. ಆದ್ದರಿಂದ ಅವನು ಇಮಾಮರ ಜತೆ ಯಾವ ತಕ್ಬೀರ್‌ನಲ್ಲಿ ಸೇರಿಕೊಳ್ಳುತ್ತಾನೋ ಅದರಲ್ಲಿ ಅವನು ಇಮಾಮರು ಪಠಿಸುವುದನ್ನೇ ಪಠಿಸಬೇಕು. ಉದಾ: ಆತನು ಇಮಾಮರ ಮೂರನೆಯ ತಕ್ಬೀರ್‌ನಲ್ಲಿ ಬಂದು ಸೇರಿಕೊಂಡರೆ ಆತನೂ ದುಆ ಪಠಿಸಬೇಕು. ಇಮಾಮ್ ಸಲಾಮ್ ಹೇಳಿದ ಬಳಿಕ ಮೊದಲು ಸನಾ (ಹಮ್ದ್) ನಂತರ ದರೂದ್ (ಸಲಾತ್)ಗಳನ್ನು ಕಝಾ (ಸಂದಾಯ) ಮಾಡಬೇಕು.

## 15. ಕಬ್ರ್ (ಗೋರಿ)ನ ಬಳಿ ಜನಾಝಾ ನಮಾಝ್

ಓರ್ವ ಕರಿಯ ವ್ಯಕ್ತಿ (ಆ ವ್ಯಕ್ತಿ ಪುರುಷನೋ ಸ್ತ್ರೀಯೋ ಎಂದು ವರದಿಗಾರರಿಗೆ ಸಂಶಯವಿದೆ) ಮಸೀದಿಯನ್ನು ಗುಡಿಸುತ್ತಿತ್ತು. ಒಮ್ಮೆ ಆ ವ್ಯಕ್ತಿಯನ್ನು ಕಾಣದಿರುವಾಗ ಪ್ರವಾದಿ(ಸ) ವಿಚಾರಿಸಿದರು: "ಮಸೀದಿಯನ್ನು ಗುಡಿಸುತ್ತಿದ್ದ ವ್ಯಕ್ತಿಗೇನಾಯಿತು?" ಸಹಾಬಿಗಳು ಹೇಳಿದರು: "ಆ ವ್ಯಕ್ತಿ ತೀರಿಕೊಂಡಿದ್ದಾರೆ." ಪ್ರವಾದಿ(ಸ) ಹೇಳಿದರು: "ನೀವು ನನಗೇಕೆ ತಿಳಿಸಲಿಲ್ಲ." ಸಹಾಬಿಗಳು ಹೇಳಿದರು. "ಅದು ರಾತ್ರಿಯ ವೇಳೆಯಾಗಿತ್ತು." ಪ್ರವಾದಿ(ಸ) ಹೇಳಿದರು: "ನನಗೆ ಅವರ ಕಬ್ರ್ ತೋರಿಸಿ." ಅನಂತರ ಪ್ರವಾದಿ(ಸ) ಅವರ ಕಬ್ರ್‌ಗೆ ಹೋಗಿ ಅವರ ಜನಾಝಾ ನಮಾಝ್ ಮಾಡಿದರು."

**(ವರದಿ: ಹ. ಅಬೂಹುರೈರಾ(ರ) - ಬುಖಾರಿ, ಮುಸ್ಲಿಮ್, ಅಹ್ಮದ್, ಇಬ್ನು ಮಾಜಃ, ಬೈಹಕಿ, ಹಾಕಿಮ್, ಇಬ್ನು ಹಿಬ್ಬಾನ್)**

ಒಂದು ಮಯ್ಯಿತ್‌ನ ಜನಾಝಾ ನಮಾಝ್ ಮಾಡದ ವ್ಯಕ್ತಿಯು ಅನಂತರ ಆತನ ಕಬ್ರ್‌ನ ಬಳಿ ಜನಾಝಾ ನಮಾಝ್ ಮಾಡಬಹುದು. ಇತರರು ಆತನ ಜನಾಝಾ ನಮಾಝ್ ಮಾಡಿದ್ದರೂ ಮಾಡದಿದ್ದರೂ ಸರಿಯೇ ಎಂದು ಈ ಹದೀಸ್‌ನ ಆಧಾರದಲ್ಲಿ

ಇಮಾಮ್ ಶಾಫಿಈ ಸಹಿತ ಹೆಚ್ಚಿನ ಇಮಾಮರು ಮತ್ತು ಮುಹದ್ದಿಸ್‌ಗಳು ಅಭಿಪ್ರಾಯ ಪಡುತ್ತಾರೆ. (ಅಲ್ ಫತ್ಹುರ್ರಬ್ಬಾನೀ, ಸಂಪುಟ -7, ಪುಟ: 228)

ಆದರೆ ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ ಇತರರು ಜನಾಝಾ ನಮಾಝ್ ಮಾಡಿರದ ವ್ಯಕ್ತಿಯ ಕಬ್ರ್‌ನ ಮೇಲೆ ಮೂರು ದಿನಗಳ ಒಳಗೆ (ಅಂದರೆ ಮಯ್ಯಿತ್ ಬಿರಿದು ಹೋಗುವುದಕ್ಕಿಂತ ಮುಂಚೆ) ಮಾತ್ರ ಜನಾಝಾ ನಮಾಝ್ ಮಾಡಬಹುದಾಗಿದೆ.

## 16. ಪರೋಕ್ಷದ ಜನಾಝಾ ನಮಾಝ್

(ಇಥಿಯೋಪಿಯಾದ ಮುಸ್ಲಿಮ್ ದೊರೆ) ನಜ್ಜಾಶಿಯವರು (ಇಥಿಯೋಪಿಯಾದಲ್ಲಿ) ನಿಧನರಾದ ದಿವಸ ಪ್ರವಾದಿ(ಸ) (ಮದೀನಾದಲ್ಲಿ) ನಮಗೆ ಅವರ ನಿಧನ ವಾರ್ತೆ ತಿಳಿಸಿದರು. ಪ್ರವಾದಿವರ್ಯರು(ಸ) ಸಹಾಬಿಗಳ ಜತೆ 'ಮುಸಲ್ಲಾ' (ಈದ್‌ಗಾಹ್ ಅಥವಾ ಜನಾಝಾಗಾಹ್)ದ ಕಡೆಗೆ ಹೊರಟರು. ಸಹಾಬಿಗಳು ಪ್ರವಾದಿವರ್ಯರ(ಸ) ಹಿಂದೆ ಪಂಕ್ತಿಗಳನ್ನು ಕಟ್ಟಿದರು. ಪ್ರವಾದಿ(ಸ) ಜನಾಝಾ ನಮಾಝ್ ಮಾಡಿಸುತ್ತಾ ನಾಲ್ಕು ತಕ್ಬೀರ್‌ಗಳನ್ನು ಹೇಳಿದರು.

**(ವರದಿ: ಹ. ಅಬೂಹುರೈರಾ(ರ) - ಬುಖಾರಿ, ಮುಸ್ಲಿಮ್, ಬೈಹಕಿ, ಶಾಫಿಈ, ಮುವತ್ತಾ ಇಮಾಮ್ ಮಾಲಿಕ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ)**

ಈ ಹದೀಸ್‌ನ ಆಧಾರದಲ್ಲಿ ಯಾವುದೇ ಮಯ್ಯಿತ್‌ನ ಗಾಯಿಬಾನಾ (ಅನುಪಸ್ಥಿತಿಯಲ್ಲಿ) ಜನಾಝಾ ನಮಾಝ್ ಮಾಡಬಹುದಾಗಿದೆ ಎಂಬುದು ಇಮಾಮ್ ಶಾಫಿಈ(ರ) ಸಹಿತ ಹೆಚ್ಚಿನ ಮುಹದ್ದಿಸ್‌ಗಳ ಅಭಿಪ್ರಾಯವಾಗಿದೆ.

ಆದರೆ ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ ಜನಾಝಾ ನಮಾಝ್‌ಗೆ ಮಯ್ಯಿತ್ ಎದುರಲ್ಲಿ ಇರುವುದು ಅಗತ್ಯ. ಆದ್ದರಿಂದ ಮಯ್ಯಿತ್‌ನ ಅನುಪಸ್ಥಿತಿಯಲ್ಲಿ (ಗಾಯಿಬಾನಾ) ಜನಾಝಾ ನಮಾಝ್ ಮಾಡುವುದು ಸರಿಯಲ್ಲ.

ಮೇಲಿನ ಹದೀಸ್‌ಗೆ ಹನಫೀ ಪಂಡಿತರು ಈ ರೀತಿ ವಿವರಣೆ ನೀಡುತ್ತಾರೆ.

ನಜ್ಜಾಶೀ(ರ) ಅವರ ನಿಧನ ಒಂದು ಬಹುದೇವಾರಾಧಕ ಜನಾಂಗದಲ್ಲಿ ಆಗಿತ್ತು. ಅಲ್ಲಿ ಅವರ ಜನಾಝಾ ನಮಾಝ್ ನಿರ್ವಹಿಸುವವರು ಯಾರೂ ಇರಲಿಲ್ಲ. ಆದ್ದರಿಂದಲೇ ಪ್ರವಾದಿವರ್ಯರು(ಸ) ಅವರ ಮಯ್ಯಿತ್‌ನ ಅನುಪಸ್ಥಿತಿಯಲ್ಲೇ ಮದೀನಾದಲ್ಲಿ ಜನಾಝಾ ನಮಾಝ್ ನಿರ್ವಹಿಸಿದರು. ಪ್ರವಾದಿವರ್ಯರು(ಸ) ನಜ್ಜಾಶಿಯ ಹೊರತು ಬೇರಾರಿಗಾಗಿಯೂ ಪರೋಕ್ಷದ ಜನಾಝಾ ನಮಾಝ್ ಮಾಡಿರಲಿಲ್ಲ. ಆದ್ದರಿಂದ ಇದು ಒಂದು ಸಾಮಾನ್ಯ ನಿಯಮವಾಗುವುದಿಲ್ಲ.

### ಪರೋಕ್ಷದ ಜನಾಝಾ ನಮಾಝ್‌ನ ಕ್ರಮ

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಇಂದು ನಿಮ್ಮ ಸೋದರ ನಜ್ಜಾಶಿ(ರ) ಅವರು ನಿಧನರಾಗಿದ್ದಾರೆ. ನೀವು ಎದ್ದು ನಿಂತು ಅವರ ಜನಾಝಾ ನಮಾಝ್ ನಿರ್ವಹಿಸಿರಿ." ಆ ಪ್ರಕಾರ ನಾವು ನಿಂತೆವು. ಮಯ್ಯಿತ್ ನಮಾಝ್‌ಗೆ ಪಂಕ್ತಿಬದ್ಧರಾಗುವಂತೆ ಪಂಕ್ತಿಬದ್ಧರಾದೆವು ಮತ್ತು ಮುಂದೆ ಇಟ್ಟಿರುವ ಮಯ್ಯಿತ್‌ಗಾಗಿ ಜನಾಝಾ ನಮಾಝ್ ಮಾಡುವಂತೆ ನಾವು ಅವರ ಜನಾಝಾ ನಮಾಝ್ ಮಾಡಿದೆವು.

(ವರದಿ: ಇಮ್ರಾನ್ ಬಿನ್ ಹಸೀನ್(ರ)-ತಿರ್ಮಿದಿ, ಅಹ್ಮದ್, ನಸಾಈ)

## 17. ಹುತಾತ್ಮನ ಜನಾಝಾ ನಮಾಝ್

ರಣರಂಗದಲ್ಲಿ ಸತ್ಯನಿಷೇಧಿಗಳ ಜತೆ ಹೋರಾಡುತ್ತಾ ಹುತಾತ್ಮನಾದ ವ್ಯಕ್ತಿಗೆ ಜನಾಝಾ ನಮಾಝ್ ನಿರ್ವಹಿಸಬಾರದು. ಅವನನ್ನು ಜನಾಝಾ ನಮಾಝ್ ಮಾಡದೆಯೇ ದಫನ್ ಮಾಡಬೇಕು.

ಪ್ರವಾದಿ(ಸ) ಉಹುದ್ ಯುದ್ಧದ ಹುತಾತ್ಮರ ಕುರಿತು ಈ ರೀತಿ ಆದೇಶಿಸಿದ್ದರು: "ಅವರನ್ನು ಸ್ನಾನ ಮಾಡಿಸಬೇಡಿರಿ. ಏಕೆಂದರೆ ಕಿಯಾಮತ್ ದಿನದಂದು ಅವರ ಪ್ರತಿಯೊಂದು ಗಾಯ ಅಥವಾ ಅವರ ಪ್ರತಿಯೊಂದು ರಕ್ತದ ಕಣ (ವರದಿಗಾರರಿಗೆ ಸಂಶಯವಿದೆ)ದಿಂದ ಕಸ್ತೂರಿಯ ಪರಿಮಳ ಬರುವುದು." ಪ್ರವಾದಿ(ಸ) ಅವರ ಜನಾಝಾ ನಮಾಝ್ ಮಾಡಿರಲಿಲ್ಲ.

(ವರದಿ: ಹ. ಜಾಬಿರ್(ರ) - ಬುಖಾರಿ, ಅಹ್ಮದ್, ಅಬೂದಾವೂದ್, ತಿರ್ಮಿದಿ, ಇಬ್ನುಮಾಜಃ, ಬೈಹಕಿ)

ಉಹುದ್‌ನ ಹುತಾತ್ಮರಿಗೆ ಸ್ನಾನ ಮಾಡಿಸಲಿಲ್ಲ. ಅವರನ್ನು ಅವರ ರಕ್ತಸಿಕ್ತ ಬಟ್ಟೆಗಳಲ್ಲಿಯೇ ದಫನ ಮಾಡಲಾಯಿತು ಮತ್ತು ಅವರ ಜನಾಝಾ ನಮಾಝ್ ಕೂಡಾ ಮಾಡಿರಲಿಲ್ಲ. (ವರದಿ: ಹ. ಅನಸ್(ರ)-ಅಹ್ಮದ್, ಅಬೂದಾವೂದ್, ತಿರ್ಮಿದಿ)

ಇದು ಇಮಾಮ್ ಶಾಫಿಈ(ರ) ಅವರ ನಿಲುವು. ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ ಇತರ ಮಯ್ಯಿತ್‌ಗಳಂತೆ ಹುತಾತ್ಮನಿಗೂ ಜನಾಝಾ ನಮಾಝ್ ಮಾಡಬೇಕು. ಅವರು ಪ್ರವಾದಿ(ಸ) ತಮ್ಮ ಚಿಕ್ಕಪ್ಪ ಹ. ಹಮ್‌ಝಾ ಮತ್ತು ಉಹುದ್‌ನ ಇತರ ಹುತಾತ್ಮರಿಗೆ ಜನಾಝಾ ನಮಾಝ್ ನಿರ್ವಹಿಸಿದ್ದರು ಎಂಬ ಅಬೂದಾವೂದ್, ನಸಾಈ, ಬುಖಾರಿ, ಮುಸ್ಲಿಮ್‌ಗಳಲ್ಲಿ ಬಂದಿರುವ ಆಧಾರದಲ್ಲಿ ಹೀಗೆ ಅಭಿಪ್ರಾಯ ಪಡುತ್ತಾರೆ.

ಅಹ್ಲುಲ್ ಹದೀಸ್ ಉಲೆಮಾಗಳ ಪ್ರಕಾರ ಹುತಾತ್ಮರ ಜನಾಝಾ ನಮಾಝ್ ಕಡ್ಡಾಯವೂ ಅಲ್ಲ, ನಿಷಿದ್ಧವೂ ಅಲ್ಲ. ಆದ್ದರಿಂದ ಜನಾಝಾ ನಮಾಝ್ ಮಾಡಿದರೂ ಮಾಡದಿದ್ದರೂ ಆಗುತ್ತದೆ.

ಇದು ಕೇವಲ ರಣರಂಗದಲ್ಲಿಯೇ ಹುತಾತ್ಮರಾದವರ ವಿಷಯ. ಇನ್ನು, ರಣರಂಗದಲ್ಲಿ ಗಾಯಗೊಂಡು ಆ ಬಳಿಕ ನಿಧನ ಹೊಂದಿದರೆ, ಇಮಾಮ್ ಶಾಫಿಈ(ರ) ಅವರ ಪ್ರಕಾರವೂ

ಅದಕ್ಕೆ ಸ್ನಾನ ಮಾಡಿಸಬೇಕು ಮತ್ತು ಜನಾಝಾ ನಮಾಝ್ ನಿರ್ವಹಿಸಬೇಕು. ರಣರಂಗ ದಿಂದ ಜೀವಂತ ಮರಳಿದ ಮತ್ತು ಆ ಬಳಿಕ ನಿಧನರಾದ ಯಾರಿಗೂ ಈ ನಿಯಮ ಅನ್ವಯಿಸುತ್ತದೆ. (ಅಲ್‌ಮುಗ್ನೀ, ಭಾಗ-3, ಪುಟ: 403)

## 18. ದಂಡನೆಯಿಂದ ಮೃತರಾದವರ ಜನಾಝಾ ನಮಾಝ್

ಒಬ್ಬನು ಯಾವುದಾದರೂ ಅಪರಾಧವೆಸಗಿ, ಅವನಿಗೆ ದಂಡನೆಯಾಗಿ ಅವನು ಅದರಿಂದ ಸತ್ತರೆ ಅವನಿಗೆ ಜನಾಝಾ ನಮಾಝ್ ನಿರ್ವಹಿಸಲಾಗುವುದು.

ಜುಹೈನಾ ಗೋತ್ರದ ಒಬ್ಬ ಮಹಿಳೆ ಪ್ರವಾದಿವರ್ಯರ(ಸ) ಬಳಿಗೆ ಬಂದು ತಾನು ವ್ಯಭಿಚಾರವೆಸಗಿ ಬಸುರಿಯಾಗಿರುವುದಾಗಿ ತಪ್ಪೊಪ್ಪಿಕೊಂಡರು. ಪ್ರವಾದಿ(ಸ) ಆಕೆಯ ರಕ್ಷಕರನ್ನು ಕರೆದು ಅವರಿಗೆ ಹೀಗೆ ಹೇಳಿದರು: "ಈಕೆಯನ್ನು ನೋಡಿಕೊಳ್ಳಿ. ಈಕೆಗೆ ಹೆರಿಗೆಯಾದ ಮೇಲೆ ನನಗೆ ತಿಳಿಸಿ." ಆ ವ್ಯಕ್ತಿ ಹಾಗೆಯೇ ಮಾಡಿದರು. ಪ್ರವಾದಿ(ಸ) ಹೇಳಿದರು, "ಆಕೆಯ ಬಟ್ಟೆಗಳನ್ನು ಸರಿಯಾಗಿ ಬಿಗಿಯಿರಿ." ಅನಂತರ ಪ್ರವಾದಿ(ಸ) ಆಕೆಯನ್ನು ಕಲ್ಲೇಟಿನಿಂದ ಕೊಲ್ಲುವಂತೆ ಆಜ್ಞಾಪಿಸಿದರು. ಆ ರೀತಿ ಆಕೆಯನ್ನು ವಧಿಸಲಾಯಿತು. ಅನಂತರ ಪ್ರವಾದಿ(ಸ) ಆಕೆಯ ಜನಾಝಾ ನಮಝ್ ಮಾಡಿದರು. ಹ. ಉಮರ್(ರ) ಕೇಳಿದರು: "ಅಲ್ಲಾಹನ ಸಂದೇಶವಾಹಕರೇ! ತಾವು ಆಕೆಗೆ ಕಲ್ಲೇಟಿನಿಂದ ಕೊಲ್ಲುವ ಶಿಕ್ಷೆ ವಿಧಿಸಿಯೂ ಆಕೆಯ ಜನಾಝಾ ನಮಾಝ್ ಮಾಡುವುದೇ?" ಪ್ರವಾದಿ(ಸ) ಹೇಳಿದರು: "ಆಕೆ ಎಂತಹ ತೌಬಾ (ಪ್ರಾಯಶ್ಚಿತ್ತ) ಮಾಡಿರುವಳೆಂದರೆ ಅದನ್ನು ಮದೀನಾದ ಎಪ್ಪತ್ತು ಮಂದಿಗೆ ಹಂಚಿದರೆ ಅವರಿಗೆ ಅದು ಸಾಕಾಗುವುದು. ಆಕೆ ಅಲ್ಲಾಹನಿಗಾಗಿ ತನ್ನ ಪ್ರಾಣವನ್ನೇ ಬಲಿ ನೀಡುವುದಕ್ಕಿಂತ ಉತ್ತಮವಾದುದು ಏನಿರಬಹುದು."

(ವರದಿ: ಹ. ಇಮ್ರಾನ್ ಬಿನ್ ಹಸೀನ್(ರ) - ಮುಸ್ಲಿಮ್, ಅಹ್ಮದ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಬೈಹಕಿ)

ಈ ಬಗ್ಗೆ ಇಮಾಮ್ ಅಬೂಹನೀಫಾ, ಇಮಾಮ್ ಶಾಫಿಈ ಮತ್ತು ಅಹ್ಲುಲ್ ಹದೀಸ್ ಉಲಮಾಗಳಲ್ಲಿ ಒಮ್ಮತವಿದೆ.

## 19. ಫಾಸಿಕ್ (ಕರ್ಮಭ್ರಷ್ಟ)ನ ಜನಾಝಾ ನಮಾಝ್

ಪ್ರತಿಯೊಬ್ಬ ಕಲಿಮಾ ಹೇಳುವ ಮುಸ್ಲಿಮನ-ಅವನು ಕರ್ಮಭ್ರಷ್ಟ ಮತ್ತು ದುರಾಚಾರಿ ಯಾಗಿದ್ದರೂ ಸರಿಯೇ-ಜನಾಝಾ ನಮಾಝ್ ಮಾಡಬಹುದು. ಏಕೆಂದರೆ ಪ್ರವಾದಿ(ಸ) ಹೀಗೆ ಹೇಳಿರುವರು:

"ಲಾ ಇಲಾಹ ಇಲ್ಲಲ್ಲಾಹ್ ಹೇಳುವ ಪ್ರತಿಯೊಬ್ಬನ ಜನಾಝಾ ನಮಾಝ್ ನಿರ್ವಹಿಸಿರಿ."

ಈ ಬಗ್ಗೆ ಇಮಾಮ್ ಅಬೂಹನೀಫಾ, ಇಮಾಮ್ ಶಾಫಿಈ ಸಹಿತ ಹೆಚ್ಚಿನ ಇಮಾಮರ ಒಮ್ಮತವಿದೆ. ಆದರೆ ಕೆಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯವಿದೆ.

ಇಸ್ಲಾಮಿ ಆಡಳಿತದ ವಿದ್ರೋಹಿ ಮತ್ತು ಯುದ್ಧನಿರತ ವ್ಯಕ್ತಿಯ ಜನಾಝಾ ನಮಾಝ್ ಮಾಡಬಾರದು ಎಂಬುದು ಇಮಾಮ್ ಅಬೂಹನೀಫಾ(ರ) ಅವರ ನಿಲುವು. ಇಮಾಮ್ ಶಾಫಿಈ(ರ) ಅವರ ಪ್ರಕಾರ ದರೋಡೆ ಮತ್ತು ಕಳ್ಳತನ ಮಾಡುವವನ ಜನಾಝಾ ನಮಾಝ್ ನಿರ್ವಹಿಸಬಾರದು.

**20. ಮೃತ ಸ್ಥಿತಿಯಲ್ಲಿ ಜನಿಸಿದ ಮಗುವಿನ ಜನಾಝಾ ನಮಾಝ್**

ಸತ್ತ ಮಗು-ಅದು ಗಂಡಾಗಿರಲಿ ಹೆಣ್ಣಾಗಿರಲಿ-ಗರ್ಭಧಾರಣೆ ಅವಧಿ ಮುಗಿಯುವುದಕ್ಕಿಂತ ಮುಂಚೆ ಜನಿಸಿದರೆ ಅಥವಾ ಗರ್ಭಛಿದ್ರವಾಗಿ ಬಂದರೆ ಅದರಲ್ಲಿ ಅಳುವ, ಚಲಿಸುವ ಅಥವಾ ಸೀನುವಂತಹ ಜೀವನದ ಲಕ್ಷಣಗಳು ಕಂಡು ಬರದಿದ್ದರೆ ಅದಕ್ಕೆ ಜನಾಝಾ ನಮಾಝ್ ಮಾಡಬೇಕಾಗಿಲ್ಲ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಮಗುವಿಗೆ-ಅದು ಸ್ವರ ಹೊರಡಿಸದಿದ್ದರೆ-ಜನಾಝಾ ನಮಾಝ್ ಮಾಡಬೇಕಾಗಿಲ್ಲ. ಅದು ವಾರೀಸು ಹಕ್ಕು ಪಡೆಯುವುದಿಲ್ಲ. ಬೇರೆಯವರೂ ಅದರ ವಾರೀಸುದಾರರಾಗುವುದಿಲ್ಲ. **(ವರದಿ: ಹ.ಜಾಬಿರ್(ರ) - ತಿರ್ಮಿದಿ, ನಸಾಈ)**

ಇದುವೇ ಇಮಾಮ್ ಅಬೂಹನೀಫಾ(ರ), ಇಮಾಮ್ ಶಾಫಿಈ(ರ) ಮತ್ತು ಅಹ್ಲುಲ್ ಹದೀಸ್ ಉಲಮಾಗಳ ಅಭಿಮತ.

•••

# ದಫನ ಮಾಡುವುದು

**1. ವಿಧಿ**

ಸಾಧ್ಯವಿರುವಾಗ ಮಯ್ಯಿತನ್ನು ದಫನ ಮಾಡಬೇಕಾದುದು ಎಲ್ಲ ಇಮಾಮರ ಪ್ರಕಾರ ಫರ್ಝ್ ಕಿಫಾಯಃ ಆಗಿದೆ.

'ಸಾಧ್ಯವಿರುವಾಗ' ಎಂದರೆ ಮಯ್ಯಿತ್ ನೆಲದಲ್ಲಿದ್ದರೆ ಅಥವಾ ಜಲದಲ್ಲಿದ್ದು ಅಲ್ಲಿಂದ ಅದು ಕೆಟ್ಟು ಹೋಗುವ ಮುಂಚೆ ನೆಲಕ್ಕೆ ಸಾಗಿಸುವುದು ಸಾಧ್ಯವಾದರೆ. ಮಯ್ಯಿತ್ ಸಮುದ್ರದಲ್ಲಿದ್ದು ನೆಲಕ್ಕೆ ತಲುಪುವಷ್ಟರಲ್ಲಿ ಕೆಟ್ಟು ಹೋಗುವ ಸಂಭವವಿದ್ದರೆ ಅದರ ಜನಾಝಾ ನಮಾಝ್ ನೆರವೇರಿಸಿ ಭಾರವಾದ ವಸ್ತುವನ್ನು ಅದಕ್ಕೆ ಕಟ್ಟಿ ಸಮುದ್ರದಲ್ಲಿ ಮುಳುಗಿಸಿ ಬಿಡಬೇಕು.

**(ದುರ್ರುಲ್ ಮುಖ್ತಾರ್, ಭಾಗ - 2, ಪುಟ: 598-599)**

## 2. ಸಮಯ

ಮಯ್ಯಿತ್ ದಫನ ಮಾಡುವುದಕ್ಕೆ ಯಾವುದೇ ನಿರ್ದಿಷ್ಟ ಸಮಯವಿಲ್ಲ. ಆದರೆ ಈ ಕೆಳಗಿನ ಮೂರು ಸಮಯದಲ್ಲಿ ಬೇಕು ಬೇಕೆಂದೇ ದಫನ ಮಾಡುವುದು 'ಮಕ್ರೂಹ್' ಆಗಿದೆ.

1) ಸೂರ್ಯನು ಉದಿಸುತ್ತಿರುವಾಗ - ಅದು ಪೂರ್ಣವಾಗಿ ಉದಿಸಿಯಾಗುವ ತನಕ.

2) ಸೂರ್ಯ ನಡುನೆತ್ತಿಗೇರಿದಾಗ - ಅಲ್ಲಿಂದ ಅದು ಇಳಿಮುಖವಾಗುವ ತನಕ.

3) ಸೂರ್ಯನು ಮುಳುಗುತ್ತಿರುವಾಗ - ಅದು ಪೂರ್ಣವಾಗಿ ಅಸ್ತಮಿಸುವ ತನಕ.

'ಬೇಕು ಬೇಕೆಂದೇ' ಎಂಬ ನಿಬಂಧನೆಯ ತಾತ್ಪರ್ಯವೇನೆಂದರೆ, ಮಯ್ಯಿತ್ ಕೆಟ್ಟು ಹೋಗುವ ಭೀತಿಯಿದ್ದರೆ ಅದನ್ನು ಎಲ್ಲ ಸಮಯಗಳಲ್ಲೂ ದಫನ ಮಾಡಬಹುದು. ಇದು ಒಂದು ಸರ್ವಸಮ್ಮತ ವಿಧಿ.

## 3. ಗೋರಿಯ ಗಾತ್ರ

ಮಯ್ಯಿತ್ ಕೊಳೆಯುವುದರಿಂದ ಉಂಟಾಗುವ ಪರಿಸರ ಮಾಲಿನ್ಯವನ್ನು ನೀಗಿಸಲು ಮತ್ತು ಮಯ್ಯಿತನ್ನು ವನ್ಯ ಮೃಗ ಇತ್ಯಾದಿಗಳಿಂದ ಸಂರಕ್ಷಿಸಲು ಕಬರ್ ಅರ್ಥಾತ್ ಗೋರಿಯನ್ನು ನಿರ್ಮಿಸಿ ಮಯ್ಯಿತನ್ನು ಮಣ್ಣಿನಡಿ ಹೂಳಲಾಗುತ್ತದೆ. ಈ ಉದ್ದೇಶಕ್ಕಾಗಿ ಮಯ್ಯಿತನ್ನು ಮಣ್ಣಿನಡಿ ದಫನ ಮಾಡಿದರೆ ಸಾಕಾಗುತ್ತದೆ. ಆದರೂ ಕಬರ್ (ಗೋರಿ) ಆಳವೂ ವಿಶಾಲವೂ ಆಗಿರುವುದು ಅಪೇಕ್ಷಣೀಯವಾಗಿದೆ. ಪ್ರವಾದಿ(ಸ) ಅದನ್ನು ಆದೇಶಿಸಿರುವರು:

ಓರ್ವ ಅನ್ಸಾರಿ ಸಹಾಬಿ ವರದಿ ಮಾಡುತ್ತಾರೆ: "ನಾವು ಪ್ರವಾದಿವರ್ಯರ(ಸ) ಜತೆ ಒಂದು ಜನಾಝಾಕ್ಕೆ ಹೋದೆವು. ನಾನು ಓರ್ವ ಬಾಲಕನಾಗಿದ್ದು ನನ್ನ ತಂದೆಯ ಜತೆಗಿದ್ದೆ. ಪ್ರವಾದಿ(ಸ) ಕಬರ್‌ನ ಬಳಿ ಕುಳಿತು ಅದನ್ನು ಅಗೆಯುವವರಿಗೆ 'ಕಾಲಿನ ಕಡೆ ವಿಶಾಲ ಗೊಳಿಸಿ, ತಲೆಯ ಕಡೆ ವಿಶಾಲಗೊಳಿಸಿರಿ' ಎನ್ನುತ್ತಿದ್ದುದನ್ನು ನಾನು ಕಂಡಿದ್ದೇನೆ."

**(ಅಬೂದಾವೂದ್, ತಿರ್ಮಿದಿ, ಅಹ್ಮದ್, ನಸಾಈ)**

ಆದರೆ ಹದೀಸ್‌ನಲ್ಲಿ ಕಬರ್ ಎಷ್ಟು ವಿಶಾಲವಾಗಿರಬೇಕೆಂದು ತಿಳಿಸಲಾಗಿಲ್ಲ. ಆದ್ದರಿಂದ ಆ ಬಗ್ಗೆ ಇಮಾಮರಲ್ಲಿ ಭಿನ್ನಾಭಿಪ್ರಾಯವಿದೆ.

ಇಮಾಮ್ ಶಾಫಿಈ(ರ) ಅವರ ಪ್ರಕಾರ ಕಬರ್ ಒಬ್ಬ ವ್ಯಕ್ತಿಯಷ್ಟು ಆಳವಾಗಿರುವುದು ಉತ್ತಮ.

**(ನೈಲುಲ್ ಔತಾರ್ ಭಾಗ -4, ಪುಟ: 84 - ಅಲ್‌ಮುಗ್ನೀ ಭಾಗ - 3, ಪುಟ: 377)**

ಹನಫೀಗಳ ಪ್ರಕಾರ, ಕಬರ್‌ನ ಉದ್ದ ಮಯ್ಯಿತ್‌ನ ಉದ್ದದಷ್ಟು ಮತ್ತು ಅಗಲ ಅದರ ಅರ್ಧದಷ್ಟು ಇರಬೇಕು. ಆಳವು ಕನಿಷ್ಠ ವ್ಯಕ್ತಿಯ ಎತ್ತರದ ಅರ್ಧದಷ್ಟಿರಬೇಕು. ಅದಕ್ಕಿಂತ ಹೆಚ್ಚು ವ್ಯಕ್ತಿಯ ಎದೆಯ ತನಕ ಅಥವಾ ಪೂರ್ಣ ಆಳೆತ್ತರ ಇದ್ದರೆ ಉತ್ತಮ.

**(ದುರ್‌ರುಲ್ ಮುಖ್ತಾರ್, ಭಾಗ - 1, ಪುಟ: 599)**

### 4. ಕಬರ್‌ನ ಎರಡು ವಿಧಗಳು

1) ಲಹದ್: ಇದರಲ್ಲಿ ಮಯ್ಯಿತ್ ಇಡುವ ಸ್ಥಳದ ಕಿಬ್ಲಾದ ಕಡೆಗಿರುವ ಗೋಡೆಯನ್ನು ನೆಲಕ್ಕೆ ಸಮಾನವಾಗಿ ಅಗೆಯಲಾಗುತ್ತದೆ.

2) ಶಕ್ಕ್: ಇದರಲ್ಲಿ ಮಯ್ಯಿತ್ ಇಡುವ ಸ್ಥಳವನ್ನು ಮಧ್ಯದಲ್ಲಿ ಮಾಡಲಾಗುತ್ತದೆ.

ಈ ಎರಡೂ ರೀತಿಯಲ್ಲಿ ಕಬರ್ ಮಾಡಬಹುದು ಎಂಬುದು ಸರ್ವಸಮ್ಮತ ವಿಷಯವಾಗಿದೆ. ಆದರೆ 'ಲಹದ್' ಮಾಡುವುದು ಉತ್ತಮ. ಇಮಾಮ್ ಶಾಫಿಈ(ರ) ಅವರ ಪ್ರಕಾರ ತೇವವುಳ್ಳ ನೆಲವಾದರೆ 'ಶಕ್ಕ್' ಮಾಡುವುದು ಉತ್ತಮ.

ಹ. ಸಅದ್ ಬಿನ್ ಅಬೀ ವಕ್ಕಾಸ್(ರ) ಅವರು ತಮ್ಮ ಮರಣದ ವೇಳೆ ಹೀಗೆ ವಸಿಯ್ಯತ್ ಮಾಡಿದರು: "ಪ್ರವಾದಿ(ಸ) ಅವರ ಕಬರ್ ಮಾಡಿದಂತೆ ನನಗೆ 'ಲಹದ್' ಮಾಡಿ ಅದಕ್ಕೆ ಮಣ್ಣು ಹಾಕಬೇಕು." **(ಮುಸ್ಲಿಮ್, ಅಹ್ಮದ್, ನಸಾಈ, ಇಬ್ನುಮಾಜಃ)**

ಮದೀನಾದಲ್ಲಿ ಇಬ್ಬರು ಗೋರಿ ಅಗೆಯುವವರಿದ್ದರು. ಒಬ್ಬನು 'ಲಹದ್' ಅಗೆಯುತ್ತಿದ್ದನು. ಇನ್ನೊಬ್ಬನು 'ಶಕ್ಕ್' ಅಗೆಯುತ್ತಿದ್ದನು. ಪ್ರವಾದಿವರ್ಯರು(ಸ) ನಿಧನ ರಾದಾಗ ಸಹಾಬಿಗಳು ಇಬ್ಬರಿಗೂ ಕರೆ ಕಳುಹಿಸಿದರು. ಅವರ ಪೈಕಿ ಯಾರು ಮೊದಲು ಬರುತ್ತಾರೋ ಅವನೇ ಪ್ರವಾದಿವರ್ಯರಿಗೆ(ಸ) ಗೋರಿ ಅಗೆಯುವನು ಎಂದು ತಿಳಿಸ ಲಾಯಿತು. 'ಲಹದ್' ಮಾಡುವವನು ಮೊದಲು ಬಂದನು. ಆದ್ದರಿಂದ ಪ್ರವಾದಿವರ್ಯರ(ಸ) ಗೋರಿಯನ್ನು 'ಲಹದ್' ಮಾಡಲಾಯಿತು.

**(ವರದಿ: ಹ. ಅನಸ್(ರ)-ಅಹ್ಮದ್, ಇಬ್ನುಮಾಜಃ, ಇಬ್ನು ಅಬೀ ಶೈಬಾ)**

### 5. ಮಯ್ಯಿತನ್ನು ಕಬರ್‌ಗೆ ಇಳಿಸುವ ದಿಕ್ಕು

ಮಯ್ಯಿತನ್ನು ಕಬರ್‌ಗೆ ಇಳಿಸುವ ಎರಡು ವಿಧಾನಗಳಿವೆ.

1) ಕಬರ್‌ನ ಕಾಲಿನ ಭಾಗದಿಂದ ಪ್ರವೇಶಿಸುವುದು.

2) ಕಿಬ್ಲಾದ ಕಡೆಯಿಂದ ಪ್ರವೇಶಿಸುವುದು.

ಎಲ್ಲ ಇಮಾಮ್‌ಗಳ ಪ್ರಕಾರ ಈ ಎರಡೂ ವಿಧಾನಗಳು ಸರಿಯಾಗಿವೆ. ಏಕೆಂದರೆ ಪ್ರವಾದಿವರ್ಯರು(ಸ) ಮತ್ತು ಸಹಾಬಿಗಳು(ರ) ಎರಡೂ ವಿಧಾನಗಳನ್ನು ಅನುಸರಿಸಿದ ಬಗ್ಗೆ ವರದಿಗಳಿವೆ.

ಇಮಾಮ್ ಶಾಫಿಈ(ರ) ಅವರೂ ಒಳಗೊಂಡಂತೆ ಹೆಚ್ಚಿನ ಇಮಾಮ್‌ಗಳ ಪ್ರಕಾರ ಮೊದಲನೆಯ ವಿಧಾನ ಉತ್ತಮವಾಗಿದೆ. ಏಕೆಂದರೆ ಹ. ಅಬ್ದುಲ್ಲಾ ಬಿನ್ ಯಝೀದ್(ರ) ಒಂದು ಮಯ್ಯಿತನ್ನು ಕಬರ್‌ನ ಕಾಲಿನ ಕಡೆಯಿಂದ ಇಳಿಸಿದರು ಮತ್ತು 'ಇದು ಸುನ್ನತ್ ಆಗಿದೆ' ಎಂದು ಹೇಳಿದರು. **(ಅಬೂದಾವೂದ್, ಬೈಹಕಿ)**

ಪ್ರವಾದಿ(ಸ) ಅವರನ್ನು ತಲೆ ಮುಂದೆ ಮಾಡಿ (ಅಂದರೆ ಕಬರ್‌ನ ಕಾಲಿನ ಕಡೆಯಿಂದ) ಕಬರ್‌ಗೆ ಇಳಿಸಲಾಯಿತು.

**(ವರದಿ: ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ)-ಮುಸ್ನದ್ ಇಮಾಮ್ ಶಾಫಿಈ)**

ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ ಎರಡನೆಯ ವಿಧಾನವು ಉತ್ತಮವಾಗಿದೆ. ಏಕೆಂದರೆ ಕಿಬ್ಲಾದ ದಿಕ್ಕು ಗೌರವಾರ್ಹವಾಗಿದೆ. ಅವರಿಗೆ ಈ ಕೆಳಗಿನ ಹದೀಸ್ ಆಧಾರವಾಗಿದೆ:

"ಪ್ರವಾದಿ(ಸ) ರಾತ್ರಿಯ ವೇಳೆ ಒಂದು ಕಬರ್‌ಗೆ ಇಳಿದರು. ಅವರಿಗಾಗಿ ದೀಪ ಹಚ್ಚಲಾಯಿತು. ಪ್ರವಾದಿ(ಸ) ಮಯ್ಯಿತನ್ನು ಕಿಬ್ಲಾದ ಕಡೆಯಿಂದ ತೆಗೆದರು."

(ವರದಿ: ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ)-ತಿರ್ಮಿದಿ)

ಹ. ಅಲೀ(ರ) ಅವರು ಯಝೀದ್ ಬಿನ್ ಮುಕಫ್ಫಫ್(ರ) ಅವರನ್ನು ಕಿಬ್ಲಾದ ಕಡೆಯಿಂದ ಕಬರ್‌ಗೆ ಇಳಿಸಿದರು. (ಇಬ್ನು ಅಬೀ ಶೈಬಾ)

**6. ಮಯ್ಯಿತನ್ನು ಕಬರ್‌ನಲ್ಲಿ ಮಲಗಿಸುವ ಕ್ರಮ**

ಮಯ್ಯಿತನ್ನು ಬಲಬದಿಗೆ ಮಾಡಿ ಮಲಗಿಸಿ ಅದರ ಮುಖವನ್ನು ಕಿಬ್ಲಾದ ಕಡೆಗೆ ಮಾಡುವುದು ಉತ್ತಮ. ಏಕೆಂದರೆ ಪ್ರವಾದಿ(ಸ) ಅವರ ಮುಖವನ್ನು ಅದೇ ರೀತಿ ಕಿಬ್ಲಾದ ಕಡೆಗೆ ಮಾಡಿ ಇಡಲಾಗಿತ್ತು. ಈ ಬಗ್ಗೆ ಎಲ್ಲ ಇಮಾಮರೂ ಒಮ್ಮತ ಹೊಂದಿದ್ದಾರೆ.

(ಅಲ್ ಫತ್ಹುರ್ರಬ್ಬಾನೀ, ಭಾಗ-8, ಪುಟ: 65)

**7. ಮಯ್ಯಿತನ್ನು ಕಬರ್‌ಗೆ ಇಳಿಸುವಾಗ ಮತ್ತು ಮಲಗಿಸುವಾಗ ಮಾಡುವ ದುಆ**

ಮಯ್ಯಿತನ್ನು ಕಬರ್‌ಗೆ ಇಳಿಸುವಾಗ ಮತ್ತು ಅದನ್ನು ಮಲಗಿಸುವಾಗ ದುಆ ಮಾಡುವುದು ಉತ್ತಮವೆಂಬುದು ಎಲ್ಲ ಇಮಾಮರ ಅಭಿಮತವಾಗಿದೆ.

(ಅಲ್ ಫತ್ಹುರ್ರಬ್ಬಾನೀ ಭಾಗ-8, ಪುಟ: 4)

1) ಪ್ರವಾದಿ(ಸ) ಹೀಗೆ ಹೇಳಿರುವರು:

ಮಯ್ಯಿತನ್ನು ಕಬರ್‌ನಲ್ಲಿ ಇಡುವಾಗ (ಇಳಿಸುವಾಗ ಮತ್ತು ಮಲಗಿಸುವಾಗ) ಈ ದುಆ ಮಾಡಿರಿ:

بِسْمِ اللّٰهِ وَعَلٰى مِلَّةِ رَسُوْلِ اللّٰهِ

"ಬಿಸ್ಮಿಲ್ಲಾಹಿ ವ ಅಲಾ ಮಿಲ್ಲತಿ ರಸೂಲಿಲ್ಲಾಹ್"

(ಅಲ್ಲಾಹನ ನಾಮದಿಂದ ಮತ್ತು ಅಲ್ಲಾಹನ ಸಂದೇಶವಾಹಕರ(ಸ) ಮಿಲ್ಲತ್ (ಕ್ರಮ)ನಲ್ಲಿ.) (ವರದಿ: ಹ: ಅಬ್ದುಲ್ಲಾ ಬಿನ್ ಉಮರ್(ರ) - ಅಹ್ಮದ್, ಅಬೂದಾವೂದ್, ತಿರ್ಮಿದಿ, ನಸಾಈ)

2) ಹ. ಅಲೀ(ರ) ಮಲಗುವಾಗ ಮತ್ತು ಯಾವುದಾದರೂ ಮಯ್ಯಿತನ್ನು ಕಬರ್‌ಗೆ ಇಳಿಸುವಾಗ ಈ ರೀತಿ ಪ್ರಾರ್ಥಿಸುತ್ತಿದ್ದರು:

بِسْمِ اللّٰهِ وَفِى سَبِيلِ اللّٰهِ وَعَلٰى مِلَّةِ رَسُوْلِ اللّٰهِ

"ಬಿಸ್ಮಿಲ್ಲಾಹಿ ವ ಫೀ ಸಬೀಲಿಲ್ಲಾಹಿ ವ ಅಲಾ ಮಿಲ್ಲತಿ ರಸೂಲಿಲ್ಲಾಹ್."

(ಅಲ್ಲಾಹನ ನಾಮದಿಂದ, ಅಲ್ಲಾಹನ ಮಾರ್ಗದಲ್ಲಿ ಮತ್ತು ಅಲ್ಲಾಹನ ಸಂದೇಶ ವಾಹಕರ(ಸ) ಕ್ರಮದಂತೆ.)

**(ವರದಿ: ಹ. ಆಸಿಮ್ ಬಿನ್ ಝುಮ್ರಃ(ರ) - ಇಬ್ನು ಅಬೀ ಶೈಬಾ)**

**8. ಜಾಗರೂಕತೆ ಪಾಲಿಸಬೇಕು**

ಪ್ರವಾದಿ(ಸ) ಈ ರೀತಿ ಹೇಳಿರುವರು: ಮಯ್ಯಿತ್‌ನ ಮೂಳೆಯನ್ನು ಮುರಿದರೆ ಅದು ಜೀವಂತ ವ್ಯಕ್ತಿಯ ಮೂಳೆ ಮುರಿದಂತೆಯೇ ಆಗಿದೆ.

**(ವರದಿ: ಹ. ಆಯಿಷಾ(ರ)-ಅಬೂದಾವೂದ್, ಅಹ್ಮದ್, ಇಬ್ನುಮಾಜಃ, ಬೈಹಕಿ)**

ಇಮಾಮ್ ಶಾಫಿಈ(ರ) ಅವರ ಪ್ರಕಾರ ಮಯ್ಯಿತನ್ನು ಕಬರ್‌ಗೆ ಇಳಿಸುವಾಗ ಪರ್ದಾ ಮಾಡುವುದು ಒಳ್ಳೆಯದು.

ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ ಮಹಿಳೆಯ ಮಯ್ಯಿತನ್ನು ಕಬರ್‌ಗೆ ಇಳಿಸುವಾಗ ಕಬರ್‌ಗೆ ಪರ್ದಾ ಮಾಡುವುದು ಉತ್ತಮ.

**(ಅಲ್ ಫತ್ಹುರ್ರಬ್ಬಾನೀ ಭಾಗ - 8, ಪುಟ: 65)**

**9. ಕಫನ್‌ನ ಗಂಟು ಬಿಚ್ಚುವುದು**

ಕಬರ್‌ನಲ್ಲಿ ಮಲಗಿಸಿದ ನಂತರ ಮಯ್ಯಿತ್‌ನ ಕಾಲು ಮತ್ತು ತಲೆಯ ಕಡೆ ಕಟ್ಟಿದ್ದ ಕಫನ್‌ನ ಗಂಟನ್ನು ಬಿಚ್ಚುವುದು ಉತ್ತಮವಾಗಿದೆ.

ಪ್ರವಾದಿ(ಸ) ನುಐಮ್ ಬಿನ್ ಮಸ್‌ಊದ್ ಅಶ್‌ಜಈ(ರ) ಅವರನ್ನು ಕಬರ್‌ಗೆ ಇಳಿಸಿದಾಗ ತಮ್ಮ ಕೈಗಳಿಂದಲೇ ಅವರ ಕಫನ್‌ನ ಗಂಟುಗಳನ್ನು ಬಿಚ್ಚಿದರು.

**(ಅಲ್ ಮುಗ್ನೀ, ಭಾಗ - 3, ಪುಟ: 383)**

ಹ. ಸಮ್ರು ಬಿನ್ ಜುಂದುಬ್(ರ) ಅವರ ಮಗ ತೀರಿ ಹೋದಾಗ ಅವರು ತಮ್ಮ ಗುಲಾಮನಿಗೆ ಈ ರೀತಿ ಆದೇಶಿಸಿದರು: ಇವನನ್ನು ಕೊಂಡು ಹೋಗಿ ದಫನ ಮಾಡಬೇಕು. ಅದನ್ನು ಇಡುವಾಗ 'ಬಿಸ್ಮಿಲ್ಲಾಹಿ ವ ಅಲಾ ಸುನ್ನತಿ ರಸೂಲಿಲ್ಲಾಹ್' ಎಂದು ಹೇಳಿ ಅದರ ತಲೆ ಮತ್ತು ಕಾಲಿನ ಗಂಟನ್ನು ಬಿಚ್ಚಬೇಕು.

**(ತಹಾವೀ ಫೀ ಶರಹಿ ಮಆನಿ ಅಲ್ ಆಸಾರ್, ಭಾಗ - 1, ಪುಟ: 292)**

**10. 'ಲಹದ್' ಅನ್ನು ಮುಚ್ಚಲು ಹಸಿ ಇಟ್ಟಿಗೆಗಳನ್ನು ಬಳಸುವುದು**

ಲಹದನ್ನು ಮುಚ್ಚಲು ಹಸಿ ಇಟ್ಟಿಗೆಗಳನ್ನು ಬಳಸಬೇಕು. ಏಕೆಂದರೆ ಪ್ರವಾದಿ(ಸ) ಅವರ ಕಬರ್‌ಗೆ ಒಂಬತ್ತು ಹಸಿ ಇಟ್ಟಿಗೆಗಳನ್ನು ಬಳಸಲಾಗಿತ್ತು. **(ನವವೀ)**

ಎಲ್ಲ ಇಮಾಮರೂ ಕಬರ್‌ಗಾಗಿ ಒಣ ಇಟ್ಟಿಗೆಗಳನ್ನು ಮತ್ತು ಮರವನ್ನು ಬಳಸುವುದು 'ಮಕ್ರೂಹ್' (ಅನಪೇಕ್ಷಿತ) ಎಂದಿರುವರು.

**(ಹಿದಾಯಃ ಭಾಗ-1, ಪು. 66, ಅಲ್ ಮುಗ್ನಿ ಭಾಗ - 3, ಪುಟ: 384)**

## 11. ಕಬರ್‌ಗೆ ಮಣ್ಣು ಹಾಕುವುದು

'ಲಹದ್' ಮುಚ್ಚಿ ಆದ ಮೇಲೆ ಎಲ್ಲರೂ ಎರಡೂ ಕೈಗಳಿಂದ ಕಬರ್‌ಗೆ ಮೂರು ಸಲ ಮಣ್ಣು ಹಾಕಬೇಕು.

ಪ್ರವಾದಿ(ಸ) ಅವರು ಉಸ್ಮಾನ್ ಬಿನ್ ಮಝ್‌ಊನ್(ರ) ಅವರ ಜನಾಝಾ ನಮಾಝ್ ಮಾಡಿದರು. ಅನಂತರ ಅವರ ಕಬರ್ ಬಳಿಗೆ ಬಂದು ನಿಂತುಕೊಂಡು ಎರಡೂ ಕೈಗಳಿಂದ ಮೂರು ಸಲ ಮಣ್ಣು ಹಾಕಿದರು.

**(ವರದಿ: ಹ. ಆಮಿರ್ ಬಿನ್ ರಬೀಅ(ರ)-ಬಝ್ಝಾರ್, ದಾರಕುತ್ನೀ, ಬೈಹಕಿ)**

ಬಝ್ಝಾರ್‌ನ ವರದಿಯಲ್ಲಿ 'ತಲೆಯ ಕಡೆ ನಿಂತುಕೊಂಡು ಮಣ್ಣು ಹಾಕಿದರು' ಎಂಬ ಪದಗಳಿವೆ.

ಹನಫೀ ಮತ್ತು ಶಾಫಿಈ ಕರ್ಮಶಾಸ್ತ್ರಗಳ ಪ್ರಕಾರ ಕಬರ್‌ಗೆ ಮಣ್ಣು ಹಾಕುವಾಗ ಮೊದಲನೆಯ ಸಲ 'ಮಿನ್‌ಹಾ ಖಲಕ್ನಾಕುಮ್' (ಇದರಿಂದಲೇ ನಾವು ನಿಮ್ಮನ್ನು ಸೃಷ್ಟಿಸಿದೆವು), ಎರಡನೆಯ ಸಲ 'ವಫೀಹಾ ನುಈದುಕುಮ್' (ಇದಕ್ಕೆ ನಿಮ್ಮನ್ನು ಮರಳಿಸುತ್ತೇವೆ) ಮತ್ತು ಮೂರನೆಯ ಸಲ 'ವ ಮಿನ್‌ಹಾ ನುಖ್ರಿಜುಕುಮ್ ತಾರತನ್ ಉಖ್ರಾ' (ಮತ್ತು ಇನ್ನೊಮ್ಮೆ ಇದರಿಂದಲೇ ನಿಮ್ಮನ್ನು ಎಬ್ಬಿಸುವೆವು)" ಎಂದು ಹೇಳಬೇಕು. ಅವರಿಗೆ ಈ ಹದೀಸ್ ಆಧಾರವಾಗಿದೆ:

ಪ್ರವಾದಿ(ಸ) ಅವರ ಪುತ್ರಿ ಉಮ್ಮು ಕುಲ್ಸೂಮ್(ರ)-ಅವರನ್ನು ಕಬರ್‌ಗೆ ಇಳಿಸುವಾಗ ಪ್ರವಾದಿ(ಸ) ಈ ರೀತಿ ಹೇಳಿದರು: "ಮಿನ್‌ಹಾ ಖಲಕ್ನಾಕುಮ್..."

**(ವರದಿ: ಹ. ಅಬೂಉಮಾಮ(ರ)-ಅಹ್ಮದ್, ಬೈಹಕಿ, ಹಾಕಿಮ್)**

## 12. ಕಬರ್‌ನ ಎತ್ತರ ಮತ್ತು ರೂಪ

ಕಬರ್ ಹೆಚ್ಚು ಎತ್ತರವೂ ಆಗಬಾರದು ಮತ್ತು ನೆಲ ಮಟ್ಟದಲ್ಲಿಯೂ ಇರಬಾರದು. ಅದು ಒಂದು ಗೇಣಿನಷ್ಟು ಎತ್ತರವಿರಬೇಕು. ಈ ಬಗ್ಗೆ ಎಲ್ಲ ಇಮಾಮರಿಗೂ ಏಕಾಭಿಪ್ರಾಯವಿದೆ.

ಹೆಚ್ಚು ಎತ್ತರವಾದ ಕಬರನ್ನು ಪ್ರವಾದಿ(ಸ) ಇಷ್ಟಪಡುತ್ತಿರಲಿಲ್ಲ. ಹ. ಅಲೀ(ರ) ಅವರು ಹಯ್ಯಾನ್(ರ) ಅವರಿಗೆ ಹೇಳಿದರು: ಪ್ರವಾದಿ(ಸ) ಅವರು ನನ್ನನ್ನು ಕಳುಹಿಸಿದ ಅಭಿಯಾನಕ್ಕೆ ನಾನು ನಿಮ್ಮನ್ನು ಕಳುಹಿಸಲೇ? ಪ್ರತಿಯೊಂದು ಕಬರನ್ನು ಸಮತಟ್ಟುಗೊಳಿಸಲಿಕ್ಕೆ ಮತ್ತು ಪ್ರತಿಯೊಂದು ಮೂರ್ತಿಯ ಕುರುಹನ್ನು ಅಳಿಸಲಿಕ್ಕೆ ನನ್ನನ್ನು ಕಳಿಸಲಾಗಿತ್ತು. **(ಮುಸ್ಲಿಮ್, ಅಬೂದಾವೂದ್, ಅಹ್ಮದ್, ತಿರ್ಮಿದಿ, ನಸಾಈ)**

ಈ ಹದೀಸ್‌ನಲ್ಲಿ 'ಸಮತಟ್ಟುಗೊಳಿಸುವ' ಎಂಬ ಪದ ಬಂದಿದ್ದರೂ ಒಂದು ಗೇಣಿನಷ್ಟು ಮಾತ್ರ ಎತ್ತರ ಇಡಬೇಕೆಂದೇ ಅದರ ತಾತ್ಪರ್ಯ. ಏಕೆಂದರೆ:

ಪ್ರವಾದಿ(ಸ) ತಮ್ಮ ಮಗ ಇಬ್ರಾಹೀಮರ ಕಬರ್‌ನ ಮೇಲೆ ನೀರು ಚಿಮುಕಿಸಿದರು. ಮರಳು ಕಲ್ಲುಗಳನ್ನು ಹಾಕಿದರು ಮತ್ತು ಅದನ್ನು ಒಂದು ಗೇಣಿನಷ್ಟು ಎತ್ತರಗೊಳಿಸಿದರು.

(ವರದಿ: ಹ. ಜಾಫರ್. ಬಿನ್ ಮುಹಮ್ಮದ್(ರ) ತಮ್ಮ ತಂದೆಯಿಂದ-ಬೈಹಕಿ, ಸಈದ್ ಬಿನ್ ಮನ್ಸೂರ್)

ಕಬರ್‌ನ ಹೊರಮೈಯು ಸಮತಟ್ಟೂ ಆಗಿರಬಹುದು. ಒಂಟೆಯ ಡುಬ್ಬದಂತೆಯೂ ಆಗಿರಬ್ಬಹುದು. ಆದರೆ ಹನಫೀ ವಿದ್ವಾಂಸರ ಪ್ರಕಾರ ಅದು ಒಂಟೆಯ ಡುಬ್ಬದಂತಿರುವುದು ಉತ್ತಮವಾಗಿದೆ.

ನಾನು ಪ್ರವಾದಿಯವರ(ಸ) ಕಬರ್ ಒಂಟೆಯ ಡುಬ್ಬದಂತೆ ನಿರ್ಮಿತವಾಗಿರುವುದನ್ನು ಕಂಡಿರುವೆನು. (ವರದಿ: ಸುಫ್ಯಾನ್ ತಮ್ಮಾರ್(ರ) - ಬುಖಾರಿ, ಇಬ್ನು ಅಬೀ ಶೈಬಾ)

'ಇಬ್ನು ಅಬೀ ಶೈಬಾ' ಅವರ ವರದಿಯಲ್ಲಿ, ಈ ಪದಗಳು ಹೆಚ್ಚಿವೆ: "ಮತ್ತು ಇದೇ ರೀತಿ ಹ. ಅಬೂಬಕರ್(ರ) ಮತ್ತು ಹ. ಉಮರ್(ರ) ಅವರ ಕಬರ್‌ಗಳನ್ನೂ. (ನಿರ್ಮಿಸಲಾಗಿದೆ.)

ಇಮಾಮ್ ಶಾಫಿಈ(ರ) ಅವರ ಪ್ರಕಾರ ಕಬರ್‌ನ ಮೇಲ್ಮೈ ಸಮತಟ್ಟಾಗಿರುವುದು ಉತ್ತಮವಾಗಿದೆ. ಅವರಿಗೆ ಈ ವರದಿ ಆಧಾರವಾಗಿದೆ:

ಹ. ಅಬೂಬಕರ್(ರ) ಅವರ ಮೊಮ್ಮಗ ಕಾಸಿಮ್ ವರದಿ ಮಾಡಿರುವರು: ನಾನು ಹ. ಆಯಿಶಾ(ರ) ಅವರ ಬಳಿಗೆ ಹೋಗಿ ನನಗೆ ಪ್ರವಾದಿವರ್ಯರ(ಸ) ಮತ್ತು ಅವರ ಇಬ್ಬರು ಸಂಗಾತಿಗಳ ಕಬರ್‌ಗಳನ್ನು ತೋರಿಸಬೇಕೆಂದು ಅರಿಕೆ ಮಾಡಿದೆ. ಆ ಕಬರ್‌ಗಳು ಹೆಚ್ಚು ಎತ್ತರವಾಗಿರಲಿಲ್ಲ. ನೆಲಕ್ಕೆ ಸಮತಟ್ಟಾಗಿಯೂ ಇರಲಿಲ್ಲ, ಅದರ ಮೇಲ್ಮೈ ಸಮತಟ್ಟಾಗಿತ್ತು ಮತ್ತು ಅವುಗಳ ಮೇಲೆ ಕೆಂಪು ಹರಳು ಕಲ್ಲುಗಳನ್ನು ಹರಡಲಾಗಿತ್ತು. (ಅಬೂದಾವೂದ್, ಹಾಕಿಮ್)

## 13. ಕಬರ್‌ಗೆ ನೀರು ಚಿಮುಕಿಸುವುದು

ಜಾಫರ್ ಬಿನ್ ಮುಹಮ್ಮದ್(ರ) ಅವರ ಹದೀಸ್‌ನಲ್ಲಿ ಪ್ರಸ್ತಾಪಿಸಲ್ಪಟ್ಟಿರುವಂತೆ ಕಬರ್ ಸಿದ್ಧವಾದಾಗ ಅದರ ಮೇಲೆ ನೀರು ಚಿಮುಕಿಸುವುದು ಉತ್ತಮವಾಗಿದೆ.

## 14. ಕಬರ್‌ನ ಮೇಲೆ ಏನಾದರೂ ಚಿಹ್ನೆ ಇಡುವುದು

ಕಬರನ್ನು ಗುರುತಿಸಲಿಕ್ಕಾಗಿ ಅದರ ತಲೆಯ ಕಡೆ ಒಂದು ದೊಡ್ಡ ಕಲ್ಲನ್ನು ಹಾಗೆಯೇ ಇಡಬಹುದು ಅಥವಾ ಅದನ್ನು ಹೂತಿಡಬಹುದು.

ಪ್ರವಾದಿ(ಸ) ಅವರು ಹ. ಉಸ್ಮಾನ್ ಬಿನ್ ಮಝ್‌ಊನ್(ರ) ಅವರ ಕಬರ್‌ನ ಮೇಲೆ ಚಿಹ್ನೆಯ ರೂಪದಲ್ಲಿ ಒಂದು ದೊಡ್ಡ ಕಲ್ಲನ್ನು ಇಟ್ಟಿದ್ದರು.

(ವರದಿ: ಹ. ಅನಸ್(ರ) - ಇಬ್ನುಮಾಜಃ, ಅಬೂದಾವೂದ್)

**15. ದಫನ್ ಆದ ಬಳಿಕ ನಿಂತು ಮಯ್ಯಿತ್‌ಗಾಗಿ ಪ್ರಾರ್ಥಿಸುವುದು**

ದಫನ ಕಾರ್ಯ ಮುಗಿದ ಬಳಿಕ ಮಯ್ಯಿತ್‌ನ ಮಗ್ಫಿರತ್ (ಕ್ಷಮೆ) ಮತ್ತು ಸ್ಥಿರಚಿತ್ತತೆಗಾಗಿ ಪ್ರಾರ್ಥಿಸುವುದು ಉತ್ತಮ. ಪ್ರವಾದಿ(ಸ) ಮಯ್ಯಿತನ್ನು ದಫನ ಮಾಡಿದ ಬಳಿಕ ಕಬರ್‌ನ ಬಳಿ ನಿಂತು ಜನರೊಂದಿಗೆ "ನಿಮ್ಮ ಸಹೋದರನಿಗಾಗಿ ಅಲ್ಲಾಹನಲ್ಲಿ ಕ್ಷಮೆ ಮತ್ತು ದೃಢಚಿತ್ತತೆಯ ಪ್ರಾರ್ಥನೆ ಮಾಡಿರಿ. ಏಕೆಂದರೆ ಈಗ ಅವನನ್ನು ಪ್ರಶ್ನಿಸಲಾಗುವುದು" ಎಂದು ಹೇಳುತ್ತಿದ್ದರು. **(ವರದಿ: ಹ. ಉಸ್ಮಾನ್(ರ)- ಅಬೂದಾವೂದ್, ಹಾಕಿಮ್ ಬಝ್ಝಾರ್)**

ಹನಫೀ ಮತ್ತು ಶಾಫಿಈಗಳ ಪ್ರಕಾರ ದುಆ ಮಾಡುವುದಕ್ಕೆ ಕಬರ್‌ನ ಬಳಿ ಒಂದು ಒಂಟೆಯನ್ನು ದಿಬ್ಹ್ ಮಾಡಿ ಅದರ ಮಾಂಸ ವಿತರಿಸುವಷ್ಟು ಸಮಯ ನಿಲ್ಲುವುದು ಉತ್ತಮವಾಗಿದೆ. ಕೆಲವು ಅಹ್ಲುಲ್ ಹದೀಸ್ ವಿದ್ವಾಂಸರೂ ಇದನ್ನು ಉತ್ತಮವೆನ್ನುತ್ತಾರೆ. ಈ ಬಗ್ಗೆ ಪ್ರವಾದಿವರ್ಯರಿಂದ(ಸ) ಯಾವುದೇ ಹದೀಸ್ ವರದಿಯಾಗಿಲ್ಲ. ಆದರೆ ಹ.ಅಮ್ರ್ ಬಿನ್ ಆಸ್(ರ) ತಮ್ಮ ಮರಣದ ವೇಳೆ ಅದರ ವಸಿಯ್ಯತ್ (ಉಯಿಲು) ಮಾಡಿದ್ದರು. **(ಅಲ್ ಫತ್ಹುರ್ರಬ್ಬಾನೀ ಭಾಗ - 8, ಪುಟ: 65, ದುರ್ರುಲ್ ಮುಖ್ತಾರ್ ಭಾಗ - 1, ಪುಟ: 601, ಕಿತಾಬುಲ್ ಜನಾಯಿಝ್, ಪುಟ: 82)**

ಶಾಫಿಈಗಳ ಪ್ರಕಾರ ಮಯ್ಯಿತನ್ನು ಸಂಬೋಧಿಸಿ ಈಮಾನ್‌ನ ದೃಢಚಿತ್ತತೆಯ ಉಪದೇಶ ಮಾಡುವುದು ಕೂಡಾ ಉತ್ತಮವಾಗಿದೆ. **(ಅಲ್ ಫತ್ಹುರ್ರಬ್ಬಾನೀ ಭಾಗ-8, ಪುಟ: 66)**

**16. ಕಬರನ್ನು ಗಟ್ಟಿ ಮಾಡಿ ಕಟ್ಟುವುದು ನಿಷಿದ್ಧ**

ಪ್ರವಾದಿ(ಸ) ಅವರು ಕಬರ್‌ನ ಬಳಿ ಕುಳಿತುಕೊಳ್ಳುವುದನ್ನು, ಅದನ್ನು ಗಟ್ಟಿ ಮಾಡಿ ಕಟ್ಟುವುದನ್ನು ಮತ್ತು ಅದರ ಮೇಲೆ ಕಟ್ಟಡ ನಿರ್ಮಿಸುವುದನ್ನು ನಿಷೇಧಿಸಿರುವುದನ್ನು ನಾನು ಕೇಳಿದ್ದೇನೆ. **(ವರದಿ: ಹ. ಜಾಬಿರ್(ರ)-ಅಹ್ಮದ್, ಮುಸ್ಲಿಮ್, ಅಬೂದಾವೂದ್, ನಸಾಈ, ಬೈಹಕಿ, ತಿರ್ಮಿದಿ)**

ತಿರ್ಮಿದಿ ಮತ್ತು ನಸಾಈಯಲ್ಲಿ "ಮತ್ತು ಅದರ ಮೇಲೆ ಬರೆಯುವುದನ್ನು" (ಫಲಕ ಇಡುವುದನ್ನು) ಎಂಬ ಪದಗಳು ಹೆಚ್ಚಿವೆ.

ನಾಲ್ಕು ಕರ್ಮಶಾಸ್ತ್ರ ಇಮಾಮ್‌ಗಳ ಪ್ರಕಾರ, ಕಬರನ್ನು ಗಟ್ಟಿ ಮಾಡಿ ಕಟ್ಟುವುದು ಮಕ್ರೂಹ್(ಅನಪೇಕ್ಷಿತ) ಆಗಿದೆ. ಇಮಾಮ್ ಇಬ್ನು ಹಝ್ಮ್(ರ) ಅವರ ಪ್ರಕಾರ, ಅದು ಹರಾಮ್(ನಿಷಿದ್ಧ) ಆಗಿದೆ. ಯಾವ ಕರ್ಮಶಾಸ್ತ್ರ ವಿದ್ವಾಂಸರೂ ಅದನ್ನು ಧರ್ಮಸಮ್ಮತವೆಂದು ಪರಿಗಣಿಸುವುದಿಲ್ಲ. **(ಅಲ್ ಫತ್ಹುರ್ರಬ್ಬಾನೀ, ಭಾಗ - 8 ಪುಟ: 83)**

**17. ಕಬರ್‌ನ ಮೇಲೆ ಮಸೀದಿ ಅಥವಾ ಕಟ್ಟಡ ನಿರ್ಮಿಸುವುದು ನಿಷಿದ್ಧ**

ಕಬರ್‌ನ ಮೇಲೆ ಯಾವುದೇ ಕಟ್ಟಡ ನಿರ್ಮಿಸುವುದರಿಂದ ಪ್ರವಾದಿ(ಸ) ತಡೆದಿರುವರೆಂದು ಅನೇಕ ಹದೀಸ್‌ಗಳಲ್ಲಿ ವರದಿಯಾಗಿದೆ. ಇಮಾಮ್ ಇಬ್ನು ಹಝ್ಮ್(ರ) ಅವರ ಪ್ರಕಾರ ಅದು ಹರಾಮ್ ಆಗಿದೆ. ಇಮಾಮ್ ಅಬೂಹನೀಫಾ ಮತ್ತು ಶಾಫಿಈ(ರ) ಅವರ

ಪ್ರಕಾರ ಅಲಂಕಾರ ಮತ್ತು ಪ್ರತಿಷ್ಠೆಗಾಗಿ ಅಂತಹ ಕಟ್ಟಡವನ್ನು ಕಟ್ಟುವುದು ಹರಾಮ್ ಆಗಿದೆ. ಅದರ ಉದ್ದೇಶ ಕೇವಲ ಕಬರನ್ನು ಗಟ್ಟಿಗೊಳಿಸುವುದಾಗಿದ್ದರೆ ಅದು ಮಕ್ರೂಹ್ (ಅನಪೇಕ್ಷಿತ) ಆಗಿದೆ. ಕಬರಸ್ಥಾನದ ಭೂಮಿಯು ವಕ್ಫ್ ಅಥವಾ ದತ್ತಿಯಾಗಿದ್ದರೆ ಅದರ ಮೇಲೆ ಕಟ್ಟಡ ನಿರ್ಮಿಸುವುದು ಎಲ್ಲಾ ಸ್ಥಿತಿಯಲ್ಲೂ ಹರಾಮ್ ಆಗಿದೆ.

**(ದುರ್ರುಲ್ ಮುಖ್ತಾರ್, ಭಾಗ-1, ಪುಟ: 601, ಫತ್ಹುರ್ರಬ್ಬಾನೀ ಭಾಗ-8, ಪುಟ: 84)**

## 18. ಕಬರ್‌ನ ಮೇಲೆ ಫಲಕ ಇಡುವುದು ನಿಷಿದ್ಧ

ಕಬರ್‌ನ ಮೇಲೆ ಫಲಕ ಇಡುವುದನ್ನು ಪ್ರವಾದಿ(ಸ) ನಿಷೇಧಿಸಿರುವರು.

ಹನಫೀ, ಶಾಫಿಈ ಮತ್ತು ಅಹ್ಲುಲ್ ಹದೀಸ್ ಉಲಮಾಗಳ ಪ್ರಕಾರ ಕಬರ್‌ನ ಮೇಲೆ ಕುರ್‌ಆನ್ ವಾಕ್ಯ ಅಥವಾ ಇನ್ನಾವುದಾದರೂ ವಿಷಯ ಬರೆದಿಡುವುದು ಅಥವಾ ಮಯ್ಯಿತ್‌ನ ಹೆಸರು ಅಥವಾ ಮರಣದ ದಿನಾಂಕ ಬರೆದಿಡುವುದು ಮಕ್ರೂಹ್ ಆಗಿದೆ. ಆದರೆ ವಿದ್ವಾಂಸರ ಅಥವಾ ಸಜ್ಜನ ವ್ಯಕ್ತಿಯ ಕಬರ್‌ನ ಮೇಲೆ ಹೆಸರಿನ ಫಲಕ ಇಡಬಹುದು. ಹಾಗೆಯೇ ಹನಫೀಗಳ ಪ್ರಕಾರ ಕಬರ್ ನಾಮಾವಶೇಷವಾಗುವ ಭೀತಿಯಿದ್ದರೆ ಚಿಹ್ನೆಯ ರೂಪದಲ್ಲಿ ಹೆಸರಿನ ಫಲಕ ಇಡಬಹುದು.

**(ಅಲ್ ಫತ್ಹುರ್ರಬ್ಬಾನೀ ಭಾಗ - 8, ಪುಟ: 85, ದುರ್ರುಲ್ ಮುಖ್ತಾರ್ ಭಾಗ-1, ಪುಟ: 601, ಕಿತಾಬುಲ್ ಜನಾಯಿಝ್, ಪುಟ: 83)**

## 19. ಪೆಟ್ಟಿಗೆಯಲ್ಲಿಟ್ಟು ದಫನ ಮಾಡಬಾರದು

ಹದೀಸ್‌ನಲ್ಲಿ ಮಯ್ಯಿತನ್ನು ಪೆಟ್ಟಿಗೆಯಲ್ಲಿಟ್ಟು ದಫನ ಮಾಡುವ ಕುರಿತು ಪ್ರಸ್ತಾಪಿಸಲಾಗಿಲ್ಲ. ಮೃತನು ವಸಿಯ್ಯತ್ ಮಾಡಿದ್ದರೂ ತಾಬೂತ್ (ಪೆಟ್ಟಿಗೆ)ನಲ್ಲಿಟ್ಟು ದಫನ ಮಾಡುವುದು ಮಕ್ರೂಹ್ ಆಗಿದೆ ಎಂಬ ವಿಷಯದಲ್ಲಿ ಇಮಾಮರಲ್ಲಿ ಒಮ್ಮತವಿದೆ. ಒಂದು ವೇಳೆ ನೆಲ ಒದ್ದೆಯಾಗಿದ್ದರೆ ಹಾಗೆ ಮಾಡಬಹುದು.

**(ದುರ್ರುಲ್ ಮುಖ್ತಾರ್ ಭಾಗ - 1, ಪುಟ: 599, ಫತ್ಹುರ್ರಬ್ಬಾನಿ ಭಾಗ-8, ಪುಟ: 57)**

## 20. ಇತರ ವಿಧಿಗಳು

1) ಜನಾಝಾದ ಜತೆ ಕಬರಸ್ಥಾನಕ್ಕೆ ಹೋಗುವಾಗ ಜನಾಝಾವನ್ನು ನೆಲದಲ್ಲಿಡುವ ತನಕ ಯಾರೂ ಕುಳಿತುಕೊಳ್ಳಬಾರದು. ಏಕೆಂದರೆ ಯಾವುದಾದರೂ ನೆರವಿನ ಅಗತ್ಯ ಬೀಳಬಹುದು.

ಪ್ರವಾದಿ(ಸ) ಈ ರೀತಿ ಹೇಳಿರುವರು:

ಜನಾಝಾದ ಜತೆಗೆ ಹೋಗುವವರು ಜನಾಝಾವನ್ನು ಕೆಳಗಿಡುವ ತನಕ ಕುಳಿತು ಕೊಳ್ಳಬಾರದು. **(ವರದಿ: ಹ. ಅಬೂಸಈದ್ ಖುದ್ರೀ(ರ)-ಬುಖಾರಿ, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ, ಬೈಹಕಿ, ಅಹ್ಮದ್)**

2) ಮಯ್ಯಿತ್‌ನ ದಫನ ಕಾರ್ಯ ಮುಗಿಯುವ ತನಕ ಕಬರಸ್ಥಾನದಲ್ಲಿ ಕುಳಿತು ಕೊಳ್ಳುವ ಸಂದರ್ಭ ಬರಬಹುದು. ಆಗ ಕಿಬ್ಲಾಭಿಮುಖವಾಗಿ ಕುಳಿತಿರುವುದು ಒಳ್ಳೆಯದು.

ನಾವು ಪ್ರವಾದಿ(ಸ) ಅವರ ಜತೆ ಓರ್ವ ಅನ್ಸಾರಿ ಸಹಾಬಿಯ ಜನಾಝಾಕ್ಕೆ ಹೋದೆವು. ನಾವು ಕಬರಸ್ಥಾನಕ್ಕೆ ತಲುಪಿದಾಗ 'ಲಹದ್' ಸಿದ್ಧವಾಗಿರಲಿಲ್ಲ. ಪ್ರವಾದಿ(ಸ) ಕಿಬ್ಲಾಭಿಮುಖವಾಗಿ ಕುಳಿತರು. ನಾವೂ ಅವರ ಜತೆ ಕುಳಿತೆವು.

**(ವರದಿ: ಹ. ಬರಾಅ್ ಬಿನ್ ಆಝಿಬ್(ರ)-ಅಬೂದಾವೂದ್)**

3) ತುರ್ತುಸ್ಥಿತಿಯಲ್ಲಿ ಒಂದೇ ಕಬರ್‌ನಲ್ಲಿ ಎರಡು ಅಥವಾ ಮೂರು ಮಯ್ಯಿತ್‌ಗಳನ್ನು ಇಡಬಹುದು. ಆದರೆ ಏನಾದರೂ ಅನಿವಾರ್ಯತೆ ಇಲ್ಲದಿದ್ದರೆ ಹಾಗೆ ಮಾಡಬಾರದು.

ನಾವು ಉಹುದ್ ಯುದ್ಧದ ದಿನ ಪ್ರವಾದಿವರ್ಯರಲ್ಲಿ(ಸ) ಹೀಗೆ ದೂರಿಕೊಂಡೆವು: "ಅಲ್ಲಾಹನ ಸಂದೇಶವಾಹಕರೇ! ಪ್ರತಿಯೊಬ್ಬರಿಗೂ ಒಂದೊಂದು ಗೋರಿ ತೋಡುವುದು ನಮಗೆ ಕಷ್ಟವಾದೀತು." ಆಗ ಪ್ರವಾದಿ(ಸ) ಹೇಳಿದರು: "ವಿಶಾಲವಾದ ಮತ್ತು ಆಳವಾದ ಗೋರಿಯನ್ನು ತೋಡಿರಿ ಹಾಗೂ ಎರಡೆರಡು, ಮೂರು ಮೂರು ಮಯ್ಯಿತ್‌ಗಳನ್ನೂ ಒಂದೇ ಗೋರಿಯಲ್ಲಿ ದಫನ ಮಾಡಿರಿ." ಆಗ ನಾವು ಕೇಳಿದೆವು: "ಮೊದಲು ಯಾರನ್ನು ಗೋರಿಗೆ ಇಳಿಸಬೇಕು?" ಪ್ರವಾದಿ(ಸ) ಹೇಳಿದರು: "ಯಾರಿಗೆ ಕುರ್‌ಆನ್ ಹೆಚ್ಚು ನೆನಪಿದೆಯೋ ಅವರಿಗೆ ಆದ್ಯತೆ ನೀಡಿರಿ." **(ವರದಿ: ಹ. ಹಿಶಾಮ್ ಬಿನ್ ಆಮಿರ್(ರ)-ನಸಾಈ, ಅಬೂದಾವೂದ್, ತಿರ್ಮಿದಿ, ಬೈಹಕಿ, ಅಹ್ಮದ್)**

4) ಬಂಧುಗಳನ್ನು ಒಂದೇ ಕಡೆ ದಫನ ಮಾಡುವುದು ಒಳ್ಳೆಯದು.

ಹ. ಉಸ್ಮಾನ್ ಬಿನ್ ಮಝ್‌ಊನ್(ರ) ಅವರು ನಿಧನರಾದಾಗ ಪ್ರವಾದಿ(ಸ) ಹೀಗೆ ಹೇಳಿದರು: "ಅವರ ಮನೆಯವರ ಪೈಕಿ ಯಾರ ಮರಣವಾದರೂ ನಾನು ಆತನನ್ನು ಅವರ ಬಳಿಯಲ್ಲೇ ದಫನ ಮಾಡುವೆನು. **(ಅಲ್ ಮುಗ್ನೀ, ಭಾಗ-3, ಪುಟ: 389)**

5) ಶಹೀದ್‌ರನ್ನು ಅವರು ಹುತಾತ್ಮರಾದ ಸ್ಥಳದಲ್ಲೇ ದಫನ ಮಾಡುವುದು ಒಳ್ಳೆಯದು.

ಪ್ರವಾದಿ(ಸ) ಹೀಗೆ ಹೇಳಿರುವರು:

"ಹುತಾತ್ಮರನ್ನು ಅವರು ಹುತಾತ್ಮರಾದ ಸ್ಥಳಗಳಲ್ಲೇ ದಫನ ಮಾಡಿರಿ."

**(ವರದಿ: ಹ. ಜಾಬಿರ್(ರ) - ಇಬ್ನುಮಾಜಃ)**

6) ಕಬರ್‌ನ ಕಡೆ ಮುಖ ಮಾಡಿ ನಮಾಝ್ ಮಾಡುವುದು ಮತ್ತು ಕಬರ್‌ನಲ್ಲಿ ದೀಪ ಹಚ್ಚುವುದು ಹರಾಮ್ ಆಗಿದೆ. ಹೀಗೆ ಮಾಡುವವರ ಮೇಲೆ ಪ್ರವಾದಿ(ಸ) ಶಾಪ ಹಾಕಿರುವರು.

ಪ್ರವಾದಿ(ಸ) ಹೀಗೆ ಹೇಳಿರುವರು:

"ಅಲ್ಲಾಹನು ಯಹೂದಿಗಳನ್ನು ನಾಶಗೊಳಿಸಲಿ. ಅವರು ತಮ್ಮ ಪ್ರವಾದಿಗಳ ಕಬರ್‌ಗಳನ್ನು ಮಸೀದಿಗಳಾಗಿ ಮಾಡಿದರು."

**(ವರದಿ: ಹ. ಅಬೂಹುರೈರಾ(ರ) - ಬುಖಾರಿ, ಮುಸ್ಲಿಮ್)**

ಪ್ರವಾದಿ(ಸ) ಕಬರ್ ಝಿಯಾರತ್ (ಸಂದರ್ಶನ) ಮಾಡುವ ಮಹಿಳೆಯರನ್ನು, ಅದರ ಮೇಲೆ ಮಸೀದಿ ನಿರ್ಮಿಸುವವರನ್ನು ಮತ್ತು ಅದರ ಮೇಲೆ ದೀಪ ಹಚ್ಚುವವರನ್ನು ಶಪಿಸಿರುವರು.

(ವರದಿ: ಹ. ಇಬ್ನು ಅಬ್ಬಾಸ್(ರ)-ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ)

•••

# ಸಂತಾಪ ಸೂಚನೆ

## 1. ಪುಣ್ಯ ಮತ್ತು ಮಹತ್ವ

ಮಯ್ಯಿತ್‌ನ ಮನೆಯವರಿಗೆ ಸಂತಾಪ ಸೂಚಿಸುವುದು ಅರ್ಥಾತ್ ಅವರಿಗೆ ಸಹನೆಯನ್ನು ಉಪದೇಶಿಸುವುದು ಮತ್ತು ಅವರನ್ನು ಸಾಂತ್ವನಗೊಳಿಸುವುದು ಸುನ್ನತ್ ಆಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಯಾವ ಮುಸ್ಲಿಮನು ತನ್ನ ಸೋದರನ ಸಂಕಷ್ಟದಲ್ಲಿ ಅವನಿಗೆ ಸಂತಾಪ ಸೂಚಿಸುತ್ತಾನೋ ಅಲ್ಲಾಹನು ಕಿಯಾಮತ್ ದಿನದಂದು ಅವನಿಗೆ ಹಿರಿಮೆಯ ಉಡುಗೆ ತೊಡಿಸುವನು." (ವರದಿ: ಹ. ಅಮ್ರ್ ಬಿನ್ ಹಝ್ಮ್(ರ) ತಮ್ಮ ತಂದೆಯ ಮೂಲಕ ತಮ್ಮ ತಾತನಿಂದ-ಇಬ್ನುಮಾಜಃ)

"ಯಾವ ವ್ಯಕ್ತಿ ಸಂಕಷ್ಟ ಪೀಡಿತನಿಗೆ ಸಂತಾಪ ಸೂಚಿಸುತ್ತಾನೋ ಅವನಿಗೆ (ತನ್ನ ಸಂಕಷ್ಟದಲ್ಲಿ ಸಹನೆ ವಹಿಸಿದುದಕ್ಕಾಗಿ) ಆ ಸಂಕಷ್ಟ ಪೀಡಿತನಿಗೆ ಲಭಿಸುವ ಪುಣ್ಯದಷ್ಟೇ ಪುಣ್ಯ ಲಭಿಸುತ್ತದೆ." (ವರದಿ: ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ)-ತಿರ್ಮಿದಿ)

## 2. ಸಂತಾಪ ಸೂಚನೆಯ ಪದಗಳು

ಸಂತಾಪ ಸೂಚನೆಗೆ ಯಾವುದೇ ನಿರ್ದಿಷ್ಟ ಪದಗಳಿಲ್ಲ. ಆದರೆ ಹದೀಸ್‌ನಲ್ಲಿ ಬಂದಿರುವ ಪದಗಳನ್ನೇ ಸಂತಾಪ ಸೂಚನೆಗೆ ಬಳಸುವುದು ಉತ್ತಮವಾಗಿದೆ.

ಪ್ರವಾದಿ(ಸ) ಅವರ ಮಗಳ ಒಂದು ಹೆಣ್ಣು ಮಗು ತೀರಿಕೊಂಡಿತು. ಆಗ ಅವರು ಪ್ರವಾದಿವರ್ಯರಿಗೆ(ಸ) ಒಂದು ಸಂದೇಶ ಕಳುಹಿಸಿದರು. ಅದಕ್ಕೆ ಉತ್ತರವಾಗಿ ಪ್ರವಾದಿ(ಸ) ಅವರಿಗೆ ಸಲಾಮ್ ಹೇಳಿ ಕಳುಹಿಸುತ್ತಾ ಈ ರೀತಿ ತಿಳಿಸಿದರು "ಅಲ್ಲಾಹನು ನೀಡಿದ್ದು ಅವನದೇ ಆಗಿತ್ತು. ಅವನು ಮರಳಿ ಪಡೆದುದೂ ಅವನದೇ ಆಗಿತ್ತು. ಪ್ರತಿಯೊಂದು ವಸ್ತುವಿಗೂ ಅವನ ಬಳಿ ಒಂದು ಸಮಯ ನಿಗದಿಯಾಗಿದೆ. ಆದ್ದರಿಂದ (ನನ್ನ ಮಗಳು) ಸಹನೆ ವಹಿಸಬೇಕು ಮತ್ತು ಅಲ್ಲಾಹನಲ್ಲಿ ಪ್ರತಿಫಲ ಸಿಗಲೆಂದು ಸಂಕಲ್ಪ ಮಾಡಬೇಕು.

(ವರದಿ: ಹ. ಉಸಾಮಾ ಬಿನ್ ಝೈದ್(ರ)-
ಅಹ್ಮದ್, ಬುಖಾರಿ, ಮುಸ್ಲಿಮ್, ಇಬ್ನುಮಾಜಃ, ಬೈಹಕಿ)

ಪ್ರವಾದಿವರ್ಯರು(ಸ) ಒಬ್ಬನಿಗೆ ಸಂತಾಪ ಸೂಚಿಸುತ್ತಾ ಹೀಗೆ ಹೇಳಿದರು: "ಅಲ್ಲಾಹ್ ಅವನ ಮೇಲೆ ಕರುಣೆ ತೋರಲಿ ಮತ್ತು ನಿಮಗೆ ಪುಣ್ಯವನ್ನು ದಯಪಾಲಿಸಲಿ."

**(ವರದಿ: ಹ. ಅಬೂಖಾಲಿದ್ ವಾಲಿಬೀ(ರ), ಇಬ್ನು ಅಬೀ ಶೈಬಾ)**

ಹ. ಮುಆದ್‌ಬಿನ್ ಜಬಲ್(ರ) (ಅವರು ಪ್ರವಾದಿವರ್ಯರ(ಸ) ವತಿಯಿಂದ ಯಮನ್‌ನ ರಾಜ್ಯಪಾಲರಾಗಿ ನಿಯುಕ್ತರಾಗಿ ಅಲ್ಲಿ ವಾಸಿಸುತ್ತಿದ್ದಾಗ) ಅವರ ಮಗ ತೀರಿಕೊಂಡರು. ಆಗ ಪ್ರವಾದಿ(ಸ) ಅವರಿಗೆ ಈ ರೀತಿ ಪತ್ರ ಬರೆದರು: "ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ- ಈ ಪತ್ರ ಅಲ್ಲಾಹನ ಸಂದೇಶವಾಹಕರಾದ ಮುಹಮ್ಮದ್‌ರ(ಸ) ಕಡೆಯಿಂದ ಮುಆದ್ ಬಿನ್ ಜಬಲ್(ರ) ಅವರಿಗೆ. ಸಲಾಮುನ್ ಅಲೈಕ್! ನಾನು ಅಲ್ಲಾಹನನ್ನು ಸ್ತುತಿಸುತ್ತೇನೆ. ಅವನ ಹೊರತು ಅನ್ಯ ಆರಾಧ್ಯರಿಲ್ಲ. ತರುವಾಯ, ಅಲ್ಲಾಹನು ನಿಮಗೆ ಮಹಾನ್ ಪ್ರತಿಫಲವನ್ನು ದಯಪಾಲಿಸಲಿ. ನಿಮಗೆ ಸಹನೆಯನ್ನು ಕರುಣಿಸಲಿ. ನಮಗೂ ನಿಮಗೂ ಕೃತಜ್ಞತೆಯ ಸೌಭಾಗ್ಯವನ್ನು ನೀಡಲಿ. ನಮ್ಮ ಸೊತ್ತು, ನಮ್ಮ ಮನೆಯವರು ಮತ್ತು ನಮ್ಮ ಮಕ್ಕಳು ಎಲ್ಲವೂ ಅಲ್ಲಾಹನ ಉತ್ತಮ ಅನುಗ್ರಹಗಳಾಗಿವೆ. ಅವುಗಳನ್ನು ಅಲ್ಲಾಹನು ನಮಗೆ ಒಂದು ವಿಶ್ವಸ್ಥ ನಿಧಿಯ ರೂಪದಲ್ಲಿ ದಯಪಾಲಿಸಿರುವನು. ಅವುಗಳ ಸಂರಕ್ಷಣೆ ಮತ್ತು ಮೇಲ್ನೋಟ ಮಾಡುವಂತೆ ನಮಗೆ ಆದೇಶಿಸಲಾಗಿದೆ. ನಾವು ಒಂದು ನಿರ್ದಿಷ್ಟ ಅವಧಿಯ ತನಕ ಅವುಗಳಿಂದ ಪ್ರಯೋಜನ ಪಡೆಯುತ್ತೇವೆ. ಒಂದು ನಿಗದಿತ ಸಮಯದಲ್ಲಿ ಅವನು ಅವುಗಳನ್ನು ಮರಳಿ ಪಡೆಯುತ್ತಾನೆ. ನಮಗೆ ಯಾವುದಾದರೂ ವಸ್ತು ಸಿಕ್ಕಿದರೆ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುವುದು ನಮ್ಮ ಕರ್ತವ್ಯವಾಗಿದೆ. ನಮಗೇನಾದರೂ ಸಂಕಷ್ಟ ಒದಗಿದರೆ ಆ ಬಗ್ಗೆ ತಾಳ್ಮೆ ವಹಿಸುವುದು ಕೂಡಾ ನಮ್ಮ ಕರ್ತವ್ಯವಾಗಿದೆ. ನಿಮ್ಮ ಪುತ್ರ ಅಲ್ಲಾಹನ ಉತ್ತಮ ಅನುಗ್ರಹವಾಗಿದ್ದ. ಅವನ ವತಿಯಿಂದ ನಿಮ್ಮ ಬಳಿ ವಿಶ್ವಸ್ಥ ನಿಧಿಯಾಗಿದ್ದ. ಅದರ ಸಂರಕ್ಷಣೆ ಮತ್ತು ಮೇಲ್ನೋಟ ಮಾಡಬೇಕೆಂದು ನಿಮಗೆ ಆದೇಶಿಸಲಾಗಿತ್ತು. ಅಲ್ಲಾಹನು ಆ ಪುತ್ರನ ಮೂಲಕ ನಿಮಗೆ ಬಹಳ ಸುಖ-ಸಂತೋಷಗಳನ್ನು ಒದಗಿಸಿದ್ದನು. ಈಗ ಅವನನ್ನು ಅತ್ಯುನ್ನತ ಪುಣ್ಯಕ್ಕಾಗಿ ನಿಮ್ಮಿಂದ ಮರಳಿ ಪಡೆದಿರುವನು. ಆ ಪುಣ್ಯವು ಕ್ಷಮೆ, ಕರುಣೆ ಮತ್ತು ಮಾರ್ಗದರ್ಶನವಾಗಿದೆ. ನೀವು ಆ ಪುಣ್ಯವನ್ನು ಗಳಿಸಬಯಸುವಿರಾದರೆ ಸಹನೆ ವಹಿಸಿರಿ. ನಿಮ್ಮ ಅಸಹನೆಯು ನಿಮ್ಮ ಪುಣ್ಯವನ್ನು ಅಳಿಸದಿರಲಿ. ನೀವು ಮತ್ತೆ ವಿಷಾದ ಪಡುವಂತಾಗದಿರಲಿ. ನೆನಪಿಡಿರಿ! ಅಸಹನೆಯು ಯಾವ ವಸ್ತುವನ್ನೂ ಮರಳಿಸಲಾರದು. ಅದು ದುಃಖ ದುಮ್ಮಾನವನ್ನು ದೂರೀಕರಿಸಲಾರದು. ಯಾವುದು ಆಗಬೇಕಿತ್ತೋ ಅದು ಆಯಿತು, ವಸ್ಸಲಾಮ್ **(ವರದಿ: ಹಾಕಿಮ್, ಇಬ್ನು ಮರ್ದೂಯಾ)**

## 3. ಪ್ರಾರ್ಥನೆ

ಸಂತಾಪ ಸೂಚನೆಯ ವೇಳೆ ಮಯ್ಯಿತ್‌ಗಾಗಿ ಪ್ರಾರ್ಥಿಸುವುದು ಕೂಡಾ ಅಪೇಕ್ಷಣೀಯವಾಗಿದೆ.

ಹ. ಫಾತಿಮಾ(ರ) ಒಬ್ಬ ಸಹಾಬಿಯ ಮನೆಗೆ ಸಂತಾಪ ಸೂಚನೆಗಾಗಿ ಹೋದರು. ಮರಳಿ ಬಂದಾಗ 'ಎಲ್ಲಿಗೆ ಹೋಗಿದ್ದೆ?' ಎಂದು ಪ್ರವಾದಿ(ಸ) ವಿಚಾರಿಸಿದರು: ಹ. ಫಾತಿಮಾ(ರ) ಹೇಳಿದರು: ಆ ಮನೆಯವರ ಬಳಿ ಹೋಗಿದ್ದೆ. ಅಲ್ಲಿ ನಾನು ಅವರ ಮಯ್ಯಿತ್‌ಗಾಗಿ ದಯೆಯ ಪ್ರಾರ್ಥನೆ ಮಾಡಿದೆ ಮತ್ತು ಅವರಿಗೆ ಸಂತಾಪ ಸೂಚಿಸಿದೆ.

(ಅಬೂದಾವೂದ್, ನಸಾಈ)

## 4. ಸಮಯ

ಸಂತಾಪ ಸೂಚನೆಯ ಸಮಯದ ಕುರಿತು ಹದೀಸ್‌ನಲ್ಲಿ ಸ್ಪಷ್ಟ ಪದಗಳಲ್ಲಿ ಉಲ್ಲೇಖವಿಲ್ಲ. ವಿಭಿನ್ನ ಹದೀಸ್ ವರದಿಗಳ ಕಾರಣ ಇಮಾಮ್‌ಗಳಲ್ಲಿ ಈ ಬಗ್ಗೆ ಭಿನ್ನಾಭಿಪ್ರಾಯವಿದೆ.

ಶಾಫಿಈ ಮತ್ತು ಅಹ್ಲುಲ್ ಹದೀಸ್ ಉಲೆಮಾಗಳ ಪ್ರಕಾರ ಸಂತಾಪ ಸೂಚನೆಯ ಸಮಯ ದಫನ ಮಾಡುವುದಕ್ಕೆ ಮುಂಚೆ ಅಥವಾ ದಫನದ ನಂತರ ಮೂರು ದಿನಗಳವರೆಗಿದೆ.

ಹನಫೀಗಳ ಪ್ರಕಾರ ಸಂತಾಪ ಸೂಚನೆಯ ಸಮಯ ದಫನಕ್ಕಿಂತ ಮುಂಚೆ ಆಗಿದೆ. ಏಕೆಂದರೆ ದಫನದ ನಂತರ ಸಂತಾಪ ಸೂಚಿಸಿದರೆ ದುಃಖ ಮರುಕಳಿಸುತ್ತದೆ. ದಫನ ಕಾರ್ಯ ಮುಗಿದ ಕೂಡಲೇ ಜನರು ತಂತಮ್ಮ ಕೆಲಸ ಕಾರ್ಯಗಳಿಗೆ ಮರಳಬೇಕು. ಯಾರಾದರೂ ದಫನದ ವೇಳೆ ಉಪಸ್ಥಿತನಿಲ್ಲದಿದ್ದರೆ ಅವನು ಅನಂತರ ಬಂದೂ ಸಂತಾಪ ಸೂಚಿಸಬಹುದಾಗಿದೆ. **(ಅಲ್ ಫತ್ಹುರ್ರಬ್ಬಾನೀ ಭಾಗ-8 ಪುಟ: 91 ದುರ್ರುಲ್ ಮುಖ್ತಾರ್ ಭಾಗ-1 ಪುಟ: 604, ಕಿತಾಬುಲ್ ಜನಾಯಿಝ್ ಪುಟ: 97)**

## 5. ಸಭೆ

"ದಫನ ಕಾರ್ಯ ಮುಗಿದ ಬಳಿಕ ಮಯ್ಯಿತ್‌ನ ಮನೆಯವರ ಬಳಿ ಸಭೆ ಸೇರುವುದನ್ನು ಮತ್ತು ಊಟ ತಯಾರು ಮಾಡುವುದನ್ನು ನಾವು (ಸಹಾಬಿಗಳು) (ಪ್ರವಾದಿ(ಸ) ನಿಷೇಧಿಸಿದ) ಶೋಕಾಚರಣೆ ಎಂದು ಪರಿಗಣಿಸುತ್ತಿದ್ದೆವು.

**(ವರದಿ: ಹ. ಜರೀರ್ ಬಿನ್ ಅಬ್ದುಲ್ಲಾ ಬುಜುಲೀ(ರ)-ಅಹ್ಮದ್, ಇಬ್ನುಮಾಜಃ)**

ಈ ಹದೀಸ್‌ನಲ್ಲಿ ದಫನ ಕಾರ್ಯ ಮುಗಿದ ಬಳಿಕ ಜನರು ಸಂತಾಪ ಸೂಚನೆಗಾಗಿ ಮಯ್ಯಿತ್‌ನ ಮನೆಯವರ ಬಳಿ ಸಭೆ ಸೇರುವುದನ್ನು ನಿಷೇಧಿಸಲಾಗಿದೆ. ಕೆಲವು ಹನಫೀ, ಶಾಫಿಈ ಮತ್ತು ಅಹ್ಲುಲ್ ಹದೀಸ್ ಉಲಮಾಗಳ ಪ್ರಕಾರ ಈ ನಿಷೇಧವು ಸಭೆ ಸೇರಿ ಏನಾದರೂ ನಿಷಿದ್ಧ ಕಾರ್ಯ ಮಾಡಿದರೆ ಮಾತ್ರ ಅನ್ವಯಿಸುತ್ತದೆ. ಉದಾ: ಪ್ರಾಣಿ ಬಲಿ ನೀಡುವುದು, ಚಪ್ಪರ ಹಾಕುವುದು, ಸಮಾರಂಭ ಮಾಡುವುದು ಇತ್ಯಾದಿ. ಹನಫೀಗಳ ಪ್ರಕಾರ ಮೂರು ದಿನಗಳವರೆಗೆ ಸಭೆ ಸೇರುವ ಅನುಮತಿಯಿದೆ. ಆದರೆ ಹೆಚ್ಚಿನ ಶಾಫಿಈ ಪಂಡಿತರ ಪ್ರಕಾರ ಹಾಗೆ ಸಂತಾಪ ಸೂಚನೆಯ ಸಭೆ ಸೇರುವುದೇ ನಿಷಿದ್ಧವಾಗಿದೆ.

**(ಅಲ್ ಫತ್ಹುರ್ರಬ್ಬಾನೀ, ದುರ್ರುಲ್ ಮುಖ್ತಾರ್)**

### 6. ಮಯ್ಯಿತ್‌ನ ಮನೆಯವರಿಗಾಗಿ ಭೋಜನ

ಯಾವ ಮನೆಯಲ್ಲಿ ಮರಣವಾಗುತ್ತದೋ ಅವರಿಗಾಗಿ ಅವರ ನೆರೆಯವರು ಊಟ ತಯಾರಿಸಿ ಕಳುಹಿಸಿ ಕೊಡುವುದು ಅಪೇಕ್ಷಣೀಯವಾಗಿದೆ. ಅನ್ಯಥಾ ಅವರು ದುಃಖ ದಿಂದಾಗಿ ಊಟ ತಯಾರಿಸದೆ, ಊಟ ಮಾಡದೆ ಬಳಲುವ ಮತ್ತು ಅವರ ಆರೋಗ್ಯ ಕೆಡುವ ಸಂಭವವಿದೆ.

ನನ್ನ ತಂದೆ ಹ. ಜಾಫರ್(ರ) ಅವರು ಹುತಾತ್ಮರಾದ ಸುದ್ದಿ ತಲುಪಿದಾಗ ಪ್ರವಾದಿ(ಸ) ಈ ರೀತಿ ಆದೇಶಿಸಿದರು: "ಜಾಫರ್(ರ) ಅವರ ಮನೆಯವರಿಗಾಗಿ ಭೋಜನ ತಯಾರಿಸಿ ಕಳುಹಿಸಿರಿ. ಏಕೆಂದರೆ ಅವರು ಊಟ ತಯಾರಿಸುವ ಮತ್ತು ಉಣ್ಣುವ ಪರಿವೆಯೇ ಇಲ್ಲದಂತಹ ವಿಪತ್ತು ಅವರ ಮೇಲೆ ಎರಗಿದೆ." (ವರದಿ: ಹ. ಅಬ್ದುಲ್ಲಾ ಬಿನ್ ಜಾಫರ್(ರ), ಅಬೂದಾವೂದ್, ತಿರ್ಮಿದಿ, ಇಬ್ನುಮಾಜಃ, ಅಹ್ಮದ್)

ಆದರೆ ಮಯ್ಯಿತ್‌ನ ಮನೆಯವರು ಜನರಿಗಾಗಿ ಊಟ ತಯಾರಿಸುವುದು ಮಕ್ರೂಹ್ (ಆಕ್ಷೇಪಾರ್ಹ) ಆಗಿದೆ. ಈ ಬಗ್ಗೆ ನಾಲ್ವರು ಇಮಾಮ್‌ರಲ್ಲೂ ಒಮ್ಮತವಿದೆ.

♦♦♦

# ಗೋರಿ ಸಂದರ್ಶನ

### 1. ಮಹತ್ವ

ಗೋರಿ ಸಂದರ್ಶನವು ಎಲ್ಲ ಇಮಾಮರ ಪ್ರಕಾರ ಪುಣ್ಯ ಕಾರ್ಯವಾಗಿದೆ. ಆದರೆ ಅದರ ಉದ್ದೇಶ ಮೃತರಿಗಾಗಿ ಕ್ಷಮಾದಾನ ಮತ್ತು ಕರುಣೆಯ ಪ್ರಾರ್ಥನೆ ಮಾಡುವುದು, ಗೋರಿ ಗಳನ್ನು ಕಂಡು ಪಾಠ ಕಲಿಯುವುದು ಹಾಗೂ ತನ್ನ ಮರಣ ಮತ್ತು ಪರಲೋಕವನ್ನು ಸ್ಮರಿಸು ವುದಾಗಿರಬೇಕು. ಗೋರಿ ಸಂದರ್ಶನದಿಂದ ಲೌಕಿಕ ಮೋಹ ಕಡಿಮೆಯಾಗಿ ಪರಲೋಕದ ಚಿಂತೆ ಉಂಟಾಗಬೇಕು. ಆರಂಭ ಕಾಲದಲ್ಲಿ ಪ್ರವಾದಿ(ಸ) ತಮ್ಮ ಅನುಯಾಯಿ ಗಳನ್ನು ಗೋರಿ ಸಂದರ್ಶನದಿಂದ ತಡೆದಿದ್ದರು. ಆದರೆ ಅನಂತರ ಅವರು ಅದರ ಅನುಮತಿ ನೀಡಿದರು. ಈ ಬಗ್ಗೆ ಅನೇಕ ಹದೀಸ್‌ಗಳಿವೆ. ಆ ಪೈಕಿ ಎರಡನ್ನು ಮಾತ್ರ ಇಲ್ಲಿ ಉದ್ಧರಿಸುತ್ತಿದ್ದೇವೆ.

ಪ್ರವಾದಿ(ಸ) ಹೇಳಿದರು:

ನಾನು ನಿಮ್ಮನ್ನು ಗೋರಿಗಳ ಸಂದರ್ಶನದಿಂದ ತಡೆದಿದ್ದೆ. ಈಗ ನೀವು ಅದರ ಸಂದರ್ಶನ ಮಾಡಬಹುದು. ಏಕೆಂದರೆ ಅದರಿಂದ ಪರಲೋಕದ ನೆನಪು ಜಾಗೃತವಾಗುತ್ತದೆ. (ವರದಿ: ಹ. ಬುರೈದಾ ಅಸ್ಲಮಿ(ರ) - ಮುಸ್ಲಿಮ್, ಅಹ್ಮದ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ)

ನಾನು ನಿಮ್ಮನ್ನು ಗೋರಿಗಳ ಸಂದರ್ಶನದಿಂದ ತಡೆದಿದ್ದೆ. ಆದರೆ ಅದರಿಂದ ಮನಸ್ಸು ಮೆದುವಾಗುತ್ತದೆ. ಕಣ್ಣುಗಳು ತೇವಗೊಳ್ಳುತ್ತವೆ ಮತ್ತು ಪರಲೋಕದ ನೆನಪಾಗುತ್ತದೆ ಎಂದು ಈಗ ನನಗನಿಸುತ್ತದೆ. ಆದ್ದರಿಂದ ನೀವು ಗೋರಿಗಳ ಸಂದರ್ಶನ ಮಾಡಬಹುದು. ಆದರೆ ಧರ್ಮಸಮ್ಮತವಲ್ಲದ ಮತ್ತು ಅವಾಚ್ಯ ಶಬ್ದಗಳನ್ನು ನಾಲಗೆ ಯಿಂದ ಹೊರಡಿಸಬಾರದು. **(ವರದಿ: ಹ. ಅನಸ್(ರ) ಅಬೂದಾವೂದ್, ಅಹ್ಮದ್, ನಸಾಈ, ಮುವತ್ತಾ ಇಮಾಮ್ ಮಾಲಿಕ್)**

ಪ್ರವಾದಿವರ್ಯರ(ಸ) ಈ ಅನುಮತಿಯು ಕೇವಲ ಪುರುಷರಿಗಾಗಿದೆಯೇ ಅಥವಾ ಇದರಲ್ಲಿ ಸ್ತ್ರೀಯರೂ ಸೇರಿದ್ದಾರೆಯೇ ಎಂಬ ಬಗ್ಗೆ ಇಮಾಮರಲ್ಲಿ ಭಿನ್ನಾಭಿಪ್ರಾಯವಿದೆ.

ಕೆಲವು ಹನಫೀ ಮತ್ತು ಶಾಫಿಈ ಪಂಡಿತರ ಪ್ರಕಾರ ಸ್ತ್ರೀಯರಿಗೆ ಗೋರಿ ಸಂದರ್ಶನ ನಿಷಿದ್ಧವಾಗಿದೆ. (ಮಕ್ರೂಹ್ ತಹ್ರೀಮ್) ಅವರು ಈ ಕೆಳಗಿನ ಹದೀಸನ್ನು ಅದಕ್ಕೆ ಆಧಾರವಾಗಿ ಮುಂದಿಡುತ್ತಾರೆ: "ಗೋರಿಗಳನ್ನು ಸಂದರ್ಶಿಸುವ ಮಹಿಳೆಯರು, ಅದರ ಮೇಲೆ ಮಸೀದಿ ಕಟ್ಟುವವರು ಮತ್ತು ದೀಪ ಹಚ್ಚುವವರನ್ನು ಪ್ರವಾದಿ(ಸ) ಶಪಿಸಿರುವರು."

**(ವರದಿ: ಹ. ಇಬ್ನು ಅಬ್ಬಾಸ್(ರ) - ಅಹ್ಮದ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ)**

ಕೆಲವು ಹನಫೀ ಮತ್ತು ಹೆಚ್ಚಿನ ಶಾಫಿಈ ವಿದ್ವಾಂಸರ ಪ್ರಕಾರ ಮಹಿಳೆಯರು ಗೋರಿಗಳನ್ನು ಸಂದರ್ಶಿಸುವುದು ಆಕ್ಷೇಪಾರ್ಹವಾಗಿದೆ (ಮಕ್ರೂಹ್ ತನ್‌ಝೀಹೀ) ಅವರಿಗೆ ಈ ಕೆಳಗಿನ ಹದೀಸ್ ಆಧಾರವಾಗಿದೆ:

ಪ್ರವಾದಿ(ಸ) ನಮ್ಮನ್ನು (ಸ್ತ್ರೀಯರನ್ನು) ಜನಾಝಾದ ಜತೆ ಹೋಗುವುದರಿಂದ ತಡೆದಿರುವರು. ಆದರೆ ಆ ಬಗ್ಗೆ ಒತ್ತಾಯ ಮಾಡಲಿಲ್ಲ.

**(ವರದಿ: ಹ. ಉಮ್ಮು ಅತಿಯ್ಯ(ರ) - ಬುಖಾರಿ ಮುಸ್ಲಿಮ್, ಅಹ್ಮದ್, ಅಬೂದಾವೂದ್, ಇಬ್ನುಮಾಜಃ, ಬೈಹಕಿ)**

ಹೆಚ್ಚಿನ ಹನಫೀ ವಿದ್ವಾಂಸರ ಪ್ರಕಾರ ಸ್ತ್ರೀಯರು ಗೋರಿ ಸಂದರ್ಶಿಸುವುದು ಧರ್ಮಸಮ್ಮತವಾಗಿದೆ. ಅವರಿಗೆ ಮೊದಲು ನಿಷೇಧ ಇತ್ತು. ಆದರೆ ಪ್ರವಾದಿ(ಸ) ಅದರ ಅನುಮತಿ ನೀಡಿದಾಗ ಪುರುಷರಂತೆ ಸ್ತ್ರೀಯರಿಗೂ ಅದರ ಅನುಮತಿಯಿದೆ. ಅವರು ಈ ಕೆಳಗಿನ ಹದೀಸನ್ನು ಆಧಾರವಾಗಿರಿಸುತ್ತಾರೆ.

ನಾನು ಪ್ರವಾದಿ(ಸ) ಅವರಲ್ಲಿ ವಿಚಾರಿಸಿದೆ. "ನಾನು ಗೋರಿಗಳ ಸಂದರ್ಶನಕ್ಕೆ ಹೋದಾಗ ಏನು ಹೇಳಬೇಕು?" ಆಗ ಪ್ರವಾದಿ(ಸ) ಹೇಳಿದರು, ನೀನು ಈ ರೀತಿ ಹೇಳು: 'ಅಸ್ಸಲಾಮು ಅಲಾ ಅಹ್ಲದ್ದಿಯಾರ್.........'

**(ವರದಿ: ಹ. ಆಯಿಶಾ(ರ) - ಮುಸ್ಲಿಮ್, ನಸಾಈ, ಅಹ್ಮದ್)**

**(ಅಲ್ ಫತ್ಹುರ್ರಬ್ಬಾನೀ ಭಾಗ-8 ಪುಟ: 162)**

## 2. ಗೋರಿ ಸಂದರ್ಶನದ ದುಆ

ಗೋರಿ ಸಂದರ್ಶನದ ವೇಳೆ ಮೃತರಿಗೆ ಸಲಾಮ್ ಹೇಳುವುದು ಮತ್ತು ಅವರಿಗಾಗಿ ಕ್ಷಮಾದಾನದ ಪ್ರಾರ್ಥನೆ ಮಾಡುವುದು ಉತ್ತಮ. ಈ ಬಗ್ಗೆ ಪ್ರವಾದಿ(ಸ) ಅವರಿಂದ ವರದಿಯಾಗಿರುವ ಹದೀಸ್‌ಗಳ ಪೈಕಿ ಕೆಲವನ್ನು ಇಲ್ಲಿ ಕೊಡುತ್ತಿದ್ದೇವೆ:

1) ಗೋರಿ ಸಂದರ್ಶನಕ್ಕೆ ಹೋದರೆ ಈ ರೀತಿ ಪ್ರಾರ್ಥಿಸಬೇಕೆಂದು ಪ್ರವಾದಿ(ಸ) ಸಹಾಬಿಗಳಿಗೆ ಬೋಧಿಸುತ್ತಿದ್ದರು:

اَلسَّلَامُ عَلَيْكُمْ اَهْلَ الدِّيَارِ مِنَ الْمُؤْمِنِيْنَ وَالْمُسْلِمِيْنَ، اِنَّا اِنْ شَآءَ اَللّٰهُ بِكُمْ لَاحِقُوْنَ، اَنْتُمْ فَرَطُنَا وَنَحْنُ لَكُمْ تَبَعٌ وَنَسْأَلُ اللّٰهَ لَنَا وَلَكُمُ الْعَافِيَةَ

"ಅಸ್ಸಲಾಮು ಅಲೈಕುಮ್ ಅಹ್ಲದ್ದಿಯಾರಿ ಮಿನಲ್ ಮುಅ್‌ಮಿನೀನ ವಲ್ ಮುಸ್ಲಿಮೀನ್. ಇನ್ನಾ ಇನ್‌ಶಾ ಅಲ್ಲಾಹು ಬಿಕುಮ್ ಲಾಹಿಕೂನ್. ಅನ್ತುಮ್ ಫರತುನಾ ವ ನಹ್ನು ಲಕುಮ್ ತಬಉನ್. ವನಸ್‌ಅಲುಲ್ಲಾಹ ಲನಾ ವಲಕುಮುಲ್ ಆಫಿಯಃ"

(ಈ ಮನೆಯ ನಿವಾಸಿಗಳಾದ ಸತ್ಯವಿಶ್ವಾಸಿಗಳೇ ಮುಸ್ಲಿಮರೇ! ನಿಮ್ಮ ಮೇಲೆ ಶಾಂತಿಯಿರಲಿ. ಅಲ್ಲಾಹನಿಚ್ಛಿಸಿದಾಗ ನಾವೂ ನಿಮ್ಮನ್ನು ಬಂದು ಸೇರಲಿದ್ದೇವೆ. ನೀವು ನಮಗಿಂತ ಮೊದಲು ಹೋದಿರಿ. ನಾವು ನಿಮ್ಮ ನಂತರ ಬರುತ್ತಿದ್ದೇವೆ. ನಾವು ನಮಗಾಗಿಯೂ ನಿಮಗಾಗಿಯೂ ಅಲ್ಲಾಹನಲ್ಲಿ ಕ್ಷೇಮವನ್ನು ಬೇಡುತ್ತೇವೆ.)

(ವರದಿ: ಹ. ಬುರೈದಾ ಅಸ್ಲಮೀ(ರ)
-ಮುಸ್ಲಿಮ್, ಅಹ್ಮದ್, ನಸಾಈ, ಇಬ್ನುಮಾಜಃ, ಬೈಹಕಿ)

2) (ಗೋರಿ ಸಂದರ್ಶನದ ವೇಳೆ) ಏನು ಹೇಳಬೇಕೆಂದು ನಾನು ಪ್ರವಾದಿ(ಸ) ಅವರಲ್ಲಿ ವಿಚಾರಿಸಿದೆ. ಆಗ ಅವರು ನೀನು ಹೀಗೆ ಹೇಳು ಎಂದರು:

اَلسَّلَامُ عَلَيْكُمْ اَهْلَ الدِّيَارِ مِنَ الْمُؤْمِنِيْنَ وَالْمُسْلِمِيْنَ، وَيَرْحَمُ اللّٰهُ الْمُسْتَقْدِمِيْنَ مِنَّا وَالْمُتَأَخِّرِيْنَ، وَاِنَّا اِنْ شَآءَ اللّٰهُ بِكُمْ لَاحِقُوْنَ

"ಅಸ್ಸಲಾಮು ಅಲೈಕುಮ್ ಅಹ್ಲದ್ದಿಯಾರಿ ಮಿನಲ್ ಮುಲ್‌ಮಿನೀನವಲ್ ಮುಸ್ಲಿಮೀನ್. ವ ಯರ್ಹಮುಲ್ಲಾಹುಲ್ ಮುಸ್‌ತಕ್ದಿಮೀನ ಮಿನ್ನಾ ವಲ್ ಮುತಅಖ್ಖಿರೀನ್ ವ ಇನ್ನಾ ಇನ್‌ಶಾಅಲ್ಲಾಹು ಬಿಕುಮ್ ಲಾಹಿಕೂನ್."

(ಈ ಮನೆಗಳಲ್ಲಿ ವಾಸಿಸುವ ಮೂಮಿನರೆ ಮತ್ತು ಮುಸ್ಲಿಮರೆ! ನಿಮ್ಮ ಮೇಲೆ ಶಾಂತಿಯಿರಲಿ. ನಮಗಿಂತ ಮೊದಲು ಹೋದವರ ಮತ್ತು ಹಿಂದೆ ಉಳಿದವರ ಮೇಲೆ ಅಲ್ಲಾಹನು ಕರುಣೆ ತೋರಲಿ. ಅಲ್ಲಾಹನು ಬಯಸಿದಾಗ ನಾವೂ ನಿಮ್ಮನ್ನು ಬಂದು ಸೇರಲಿದ್ದೇವೆ.) (ವರದಿ: ಹ. ಆಯಿಶಾ(ರ) - ಮುಸ್ಲಿಮ್, ಅಹ್ಮದ್, ನಸಾಈ)

3) ಪ್ರವಾದಿ(ಸ) ಮದೀನಾ ಮುನವ್ವರಾದ ಗೋರಿಗಳ ಬಳಿಯಿಂದ ಸಾಗುತ್ತಿದ್ದಾಗ ಆ ಕಡೆ ಮುಖ ಮಾಡಿ ಹೀಗೆ ಹೇಳಿದರು:

اَلسَّلَامُ عَلَيْكُمْ يَآ اَهْلَ الْقُبُوْرِ يَغْفِرُاللّٰهُ لَنَا وَلَكُمْ، اَنْتُمْ سَلَفُنَا وَنَحْنُ بِالْاِثْرِ

"ಅಸ್ಸಲಾಮು ಅಲೈಕುಮ್ ಯಾ ಅಹ್ಲಲ್ ಕುಬೂರ್. ಯಗ್‌ಫಿರುಲ್ಲಾಹು ಲನಾ ವಲಕುಮ್ ಅನ್ತುಮ್ ಸಲಫುನಾ ವ ನಹ್‌ನು ಬಿಲ್ ಇಸ್ರ್"

(ಓ ಗೋರಿಗಳ ನಿವಾಸಿಗಳೇ, ನಿಮ್ಮ ಮೇಲೆ ಶಾಂತಿಯಿರಲಿ. ಅಲ್ಲಾಹನು ನಿಮಗೂ ನಮಗೂ ಕ್ಷಮಾದಾನ ನೀಡಲಿ. ನೀವು ನಮಗಿಂತ ಮುಂಚೆ ಹೋದಿರಿ. ನಾವು ನಿಮ್ಮ ಹಿಂದೆ ಬರುತ್ತಿದ್ದೇವೆ.) (ವರದಿ: ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ), ತಿರ್ಮಿದಿ)

ಗೋರಿಗಳಲ್ಲಿ ಪ್ರಾರ್ಥಿಸುವಾಗ ಕೈಗಳನ್ನು ಎತ್ತಬಹುದು. ಮೇಲೆ ಉದ್ಧರಿಸಿದ ಹ. ಆಯಿಶಾ(ರ) ಅವರ ಹದೀಸ್ ಬಹಳ ದೀರ್ಘವಾಗಿದೆ. ಅದರಲ್ಲಿ ಒಂದು ರಾತ್ರಿ ಪ್ರವಾದಿ(ಸ) 'ಜನ್ನತುಲ್ ಬಕೀಅ್' ಎಂಬ ಮದೀನಾದ ಕಬರಸ್ಥಾನಕ್ಕೆ ಹೋಗಿ ಬಹಳ ಹೊತ್ತು ಅಲ್ಲಿ ನಿಂತಿದ್ದರು ಮತ್ತು ಮೂರು ಸಲ ಕೈಯೆತ್ತಿ ಪ್ರಾರ್ಥಿಸಿದ್ದರು ಎಂದು ಕೂಡಾ ವರದಿಯಾಗಿದೆ.

